श्री लौगाक्षिभास्करप्रणीतः

# अर्थसङ्ग्रहः

## श्रीरामेश्वरभिक्षुविरचितार्थसङ्ग्रहकौमुदीसहितः

*(With Kannada and English Translation)*

*Edited by*
Rashtrapati Prashasti Puraskrita
Mahāmahopādhyāya
**Prof. K.T. Pandurangi**
Formerly Prof. of Sanskrit, Bangalore University
Hon. Director of Dvaita Vedanta Studies and
Research Foundation, B'lore.

**2009**

**This volume is published with the grant from the Govt. of India, Ministry of Human Resources Development, Dept. of Education under the central plan scheme - Development of Sanskrit Education.**



*Published by*
**Dvaita Vedanta Studies and Research Foundation**
No.11, Uttaradi Matha Compound,
Basavanagudi, Bangalore-4.

**Arthasaṅgraha** *(with Kannada and English Translation)* of Sri Laugakṣi Bhāskara & **Arthasaṅgraha Kaumudī** of Sri Rameśvarabhikṣu, Edited by Prof. K.T. Pandurangi, Published by Dvaita Vedanta Studies and Research Foundation, No.11, Uttaradi Matha Compound, Basavanagudi, Bangalore-04. Phone : 080-2662 7272

No. of Pages : xi + 275

No. of Copies : 500

Year 2009



*Copies can be had from :*

Dvaita Vedanta Studies and Research Foundation,
No.11, Uttaradi Matha Compound,
Basavanagudi, Bangalore-560 004.
Phone : 080-2662 7272

*Typeset and Printed at :* **Dundubhi Graphics**, Bangalore.

# Preface

Arthasaṅgraha is a manual of Pūrvamīmāmsā following the Bhāṭṭa tradition. Some scholars are of the opinion, that it is an abridged edition of Mīmāmsānyāyaprakāśa of Vāsudeva. The other scholars hold the view that Mīmāmsānyāyaprakāśa is an enlarged edition of Arthasaṅgraha. In any case these two introduce the Mīmāmsā doctrines briefly and clearly. Arthasaṅgraha follows the model of Tarkasaṅgraha. However, the themes of the two are quite distinct. The presentation of Mānameyodaya is more on the lines of Tarkasaṅgraha arranging the topics on Māna i.e. Pramāṇas and Meya i.e. Prameyas. Arthasaṅgraha goes by the plan of Mīmāmsā sūtras and bhāṣya. There are a few commentaries on Arthasaṅgraha. Among these Arthasaṅgraha Kaumudī of Rameśvarabhikṣu is a detailed commentary and explains the text of Arthasaṅgraha elaborately. In this volume Arthasaṅgraha with this commentary is published, Kannada and English summary of Arthasaṅgraha is also published. A glossary of the technical terms of Mīmāmsā is added. We hope this volume will be useful to the students and scholars of Pūrvamīmāmsā. I record my appreciation of the assistance given by Vidwan Krishnacharya Upadhyaya for editing the text and the commentary and also Prof. C. Ramanathan for assisting the preparation of Kannada translation of Arthasaṅgraha.

**Prof. K.T. Pandurangi**
Chariman and Hon. Director
Dvaita Vedanta Foundation.

# Introduction

Arthasaṅgraha of Laugakṣi Bhāskara is a manual of Pūrvamīmāmsā. It briefly gives all the important doctrines of Pūrvamīmāmsā spread over the twelve chapters of Jaiminī Sūtras. The definition of Dharma given in the second Sūtra of Jaiminisūtras viz. चोदनालक्षणः अर्थः धर्मः. A religious duty enjoined by the Veda that leads to the prosperity of a person who performs this duty is dharma. This sūtra, in addition to defining dharma, also states that चोदना i.e. Vedic injunction is प्रमाण authority for dharma. The entire Veda contains dharma. The Vedic statements are of five types viz., विधि, निषेध, नामधेय, मन्त्र, अर्थवाद. Among these विधि is the most important. विधि means injunction. This vidhi is of four types (i) उत्पत्तिविधि (ii) विनियोगविधि (iii) अधिकारविधि (iv) प्रयोगविधि. (i) By उत्पत्तिविधि a sacrifice or a connected item is enjoined. (ii) By विनियोगविधि the relation between an अङ्ग i.e. a subordinate item or an auxiliary with a main item is stated. (iii) By अधिकारविधि the result of the sacrifice is stated (iv) By प्रयोगविधि the organisation of the entire sacrifice with its subordinate items and auxiliaries is conveyed. For ascertaining the relation between the main and the subordinate six criteria are stated namely, श्रुति, लिङ्ग, वाक्य, प्रकरण and समाख्या. The subordinate items have to be performed in an order in relation to the main item. This is technically known as प्रयोगप्राशुभाव or क्रम. For this purpose also six criteria are stated, viz., श्रुति, अर्थ, पाठ, स्थान, मुख्य, प्रवृत्ति.

The अङ्गs, subordinate items, are classified into two viz. (i) सन्निपत्योपकारक (ii) आरादुपकारक. (i) संस्कारs like अवधात and प्रोक्षण come under सन्निपत्योपकारक. There are part and parcel of the sacrificial items and contribute to परमापूर्व. (ii) Such items that support the sacrifice from outside are आरादुपकारकs. प्रयाज etc. come under this category.

विधि i.e. injunction is also classified into three in another way viz. (i) अपूर्वविधि (ii) नियमविधि (iii) परिसङ्ख्याविधि– An injunction the subject of which is not already stated by any other Vedic statement is अपूर्वविधि (ii) नियमविधि– When for an action many means are available selecting one of them and making it mandatory is नियमविधि (iii) परिसङ्ख्याविधि– when two items are simultaneously presented excluding one of them is परिसङ्ख्याविधि. The nature of परिसङ्ख्याविधि is negative in the standard example पञ्चपञ्चनखाः भक्ष्याः पञ्चेतरभक्षण is excluded. But पञ्चभक्षण is not affirmed as it is अंशगतः प्राप्त. There is no need of affirming it by an injunction. Therefore only the exclusion of पञ्चेतरभक्षणे is the result of परिसङ्ख्याविधि.

उत्पत्तिविधि etc. the four provide the matter of the sacrifice while अपूर्वविधि, etc. three state the manner of the selection of sacrificial items.

Arthasaṅgraha discusses विनियोगविधि in detail.

The purpose of निषेध is to dissuade a person from the objects or acts that leads to अनर्थ, undesirable results. While

discussing निषेध the question whether नञ् has to be syntactically connected with धात्वर्थ or प्रत्ययार्थ is discussed. पर्युदास and such cases are also discussed.

Mantras remained the items in a sacrifice through this act of reminding these are connected with the injunction. नामधेय is a title of certain sacrifices. Four criteria are stated to consider a word in the statement of a sacrifice as title or sacrifice. (i) मत्वर्थलक्षण (ii) वाक्यभेद (iii) तत्प्रख्यशास्त्र (iv) तद्व्यपदेश.

The above summary of Arthasaṅgraha is given to facilitate such reader who have limited knowledge of Samskṛta, particularly the techinical language of the mīmāmsa.

**Prof. K.T. Pandurangi**

# विषयानुक्रमणिका

★★★

### ಮಹಾಮಹೋಪಾಧ್ಯಾಯ ಲೌಗಾಕ್ಷಿಭಾಸ್ಕರನಿಂದ ವಿರಚಿತವಾದ

# ಅರ್ಥಸಂಗ್ರಹ

## I. ಉಪೋದ್ಘಾತ ಪರಿಚಯ

### 1) ಮಂಗಳಾಚರಣ

ರಮಾದೇವಿಯ ಪತಿಯಾದ ವಾಸುದೇವನನ್ನು ನಮಸ್ಕರಿಸಿ ಲೌಗಾಕ್ಷಿಭಾಸ್ಕರನು ಜೈಮಿನಿಯ ಪೂರ್ವಮೀಮಾಂಸಾಶಾಸ್ತ್ರದ ಪರಿಚಯವನ್ನು ಮಾಡಿಕೊಲು ಅರ್ಥ-ಸಂಗ್ರಹ ಎಂಬ ಚಿಕ್ಕಗ್ರಂಥವನ್ನು ಬರೆಯುವೆನೆಂದು ಪ್ರತಿಜ್ಞೆಯನ್ನು ಮಾಡುವನು. ಇಲ್ಲಿ ಬಂದ ಅರ್ಥ ಶಬ್ದಕ್ಕೆ ಜೈಮಿನಿಸೂತ್ರಗಳ ಹನ್ನೆರಡು ಅಧ್ಯಾಯಗಳಲ್ಲಿ ಬರುವ ಪ್ರಮೇಯಗಳು ಎಂದರ್ಥ.

### 2) ಮೀಮಾಂಸಾಶಾಸ್ತ್ರದ ಆರಂಭದ ಸೂತ್ರದ ನಿರೂಪಣೆ

ಪರಮ ಕಾರಣಿಕನಾದ ಭಗವಾನ್ ಜೈಮಿನಿ ಮುನಿಯು ಧರ್ಮದ ಸ್ವರೂಪ-ವನ್ನು ತಿಳಿಸಲು ಹನ್ನೆರಡು ಅಧ್ಯಾಯಗಳಿರುವ ಮೀಮಾಂಸಾಸೂತ್ರಗಳನ್ನು ರಚಿಸಿದನು. ಅದರಲ್ಲಿ ಮೊದಲನೆಯ ಸೂತ್ರವಾದ ಅಥಾತೋ ಧರ್ಮ ಜಿಜ್ಞಾಸಾ ಎಂಬ ಸೂತ್ರದಿಂದ ಧರ್ಮದ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿರುವನು. ಧರ್ಮದ ಜಿಜ್ಞಾಸೆಯನ್ನು ಎಂದರೆ ಧರ್ಮದ ವಿಚಾರವನ್ನು ಮಾಡಬೇಕೆಂದು ತಿಳಿಸಿರುವನು. ಈ ಸೂತ್ರದಲ್ಲಿಯ 'ಅಥ' ಶಬ್ದಕ್ಕೆ ವೇದಾಧ್ಯಯನವು ಮುಗಿದ ಮೇಲೆ ಎಂದರ್ಥವು. ಅತ ಶಬ್ದಕ್ಕೆ ವೇದಾಧ್ಯಯನಕ್ಕೆ ದೃಷ್ಟವಾದ ಪ್ರಯೋಜನ-ವಿರುವುದರಿಂದ ಎಂದರ್ಥ.

'ಸ್ವಾಧ್ಯಾಯೋಽಧ್ಯೇತವ್ಯಃ' (ತೈ.ಆ. 2.15.7) (ಶ.ಬ್ರಾ. 11.5.6.3)

'ವೇದದ ಅಧ್ಯಯನ ಮಾಡಬೇಕು' ಎಂಬ ಅಧ್ಯಯನವಿಧಿಯಲ್ಲಿ ವೇದಗಳ ಅಧ್ಯಯನವು ಅರ್ಥಜ್ಞಾನರೂಪ ದೃಷ್ಟಾರ್ಥವುಳ್ಳದ್ದು. ಆದ್ದರಿಂದ ಅದರ ವಿಚಾರ ಮಾಡಬೇಕು ಎಂದು ಹೇಳಲಾಗಿದೆ.

### 3) ಧರ್ಮವಿಚಾರಶಾಸ್ತ್ರದ ಅವಶ್ಯಕತೆ

ಅಧ್ಯಯನವು ಅರ್ಥಜ್ಞಾನರೂಪದೃಷ್ಟ ಪ್ರಯೋಜನವುಳ್ಳದುದ್ದರಿಂದ ವೇದಾಧ್ಯಯನದ ಅನಂತರದಲ್ಲಿ ವೇದಾರ್ಥವಾದ ಧರ್ಮದ ವಿಚಾರವನ್ನು

ಮಾಡಬೇಕು. ಈ ಸೂತ್ರದಲ್ಲಿ 'ಕರ್ತವ್ಯ' ಎಂದರೆ 'ಮಾಡಬೇಕು' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಜಿಜ್ಞಾಸಾಪದಕ್ಕೆ ಲಕ್ಷಣಾವೃತ್ತಿಯಿಂದ 'ವಿಚಾರ' ಎಂಬ ಅರ್ಥವು. ಆದ್ದರಿಂದ ಈ ಧರ್ಮವಿಚಾರಶಾಸ್ತ್ರವನ್ನು ಆರಂಭಿಸ-ಬೇಕು ಎಂಬುದು ಈ ಮೊದಲನೆಯ ಶಾಸ್ತ್ರಾರಂಭದ ಸೂತ್ರದ ಅರ್ಥವು.

## II. ಲಕ್ಷಣ ಪರಿಚಯ

**4) ಯಾವುದು ಧರ್ಮ. ಅದರ ಲಕ್ಷಣವೇನು, ಎಂದು ಕೇಳಿದರೆ, ಅದನ್ನು ತಿಳಿಸುವುವು.**

ಯಾಗಾದಿಗಳೇ ಧರ್ಮವು, ವೇದದಿಂದ ಪ್ರತಿಪಾದಿತವಾದ ಪ್ರಯೋಜನ-ವಿರುವ ಯಾಗಾದಿಗಳು ಎಂದು ಧರ್ಮದ ಲಕ್ಷಣವು. ಅನರ್ಥಕರವಾದ ಶ್ಯೇನಯಾಗಾದಿಗಳಲ್ಲಿ ಅತಿವ್ಯಾಪ್ತಿಯನ್ನು ಪರಿಹರಿಸಲು ಅರ್ಥ ಎನ್ನಲಾಗಿದೆ. ಪ್ರಯೋಜನದಲ್ಲಿಯೇ ಅತಿವ್ಯಾಪ್ತಿಯನ್ನು ಪರಿಹರಿಸಲು ಪ್ರಯೋಜನವುಳ್ಳದ್ದು ಎಂದು ಹೇಳಲಾಗಿದೆ. ಭೋಜನಾದಿ ರಾಗಪ್ರಾಪ್ತವಾದ ವಿಷಯಗಳಲ್ಲಿ ಅತಿವ್ಯಾಪ್ತಿ-ಯನ್ನು ಪರಿಹರಿಸಲು ವೇದಪ್ರತಿಪಾದ್ಯ ಎಂದು ಹೇಳಲಾಗಿದೆ.

**5) ವೇದವು ಧರ್ಮದ ಪ್ರತಿಪಾದನೆಯನ್ನು ಮಾಡುವುದು.**

ವೇದಪ್ರತಿಪಾದ್ಯವಾದದ್ದು ಧರ್ಮವೆಂದು ಹೇಳಿದರೆ 'ಚೋದನಾಲಕ್ಷಣಃ ಅರ್ಥಃ ಧರ್ಮಃ' ಎಂಬ ಸೂತ್ರದಲ್ಲಿ ಹೇಳಿದ ಧರ್ಮಲಕ್ಷಣಕ್ಕೆ ವಿರೋಧ ಬರುವುದು. ಏಕೆಂದರೆ, ಚೋದನಾಪದಕ್ಕೆ 'ವೇದದ ಏಕದೇಶವಾದ ವಿಧಿ' ಎಂಬ ಅರ್ಥವಿರುವುದು ಎಂಬ ಆಕ್ಷೇಪವು ಸರಿಯಲ್ಲ. ಏಕೆಂದರೆ, ಚೋದನಾಶಬ್ದಕ್ಕೆ ಸಮಸ್ತ ವೇದವೆಂದೇ ಅರ್ಥವಿರುವುದು. ಸಮಸ್ತ ವೇದಕ್ಕೂ ಧರ್ಮದಲ್ಲಿ ತಾತ್ಪರ್ಯವಿರುವುದು. ಆದ್ದರಿಂದ ಸಮಸ್ತ ವೇದವು ಧರ್ಮಪ್ರತಿಪಾದಕವಾಗಿ-ರುವುದು.

**6) ವಿಧಿವಾಕ್ಯವು ವಿಧಾಯಕವಾಗಿರುವ ಕ್ರಮವು.**

'ಯಜೇತ ಸ್ವರ್ಗಕಾಮಃ' ಇತ್ಯಾದಿಯಾದ ವಾಕ್ಯದಿಂದ ಸ್ವರ್ಗವನ್ನು ಅಪೇಕ್ಷಿಸುವ ಪುರುಷನನ್ನು ಕುರಿತು ಯಾಗಾದಿಗಳು ವಿಧಿಸಲ್ಪಟ್ಟಿವೆ. 'ಯಜೇತ' ಎಂಬ ಪದದಲ್ಲಿ ಎರಡು ಅಂಶಗಳಿವೆ– (1) ಯಜ್ ಧಾತುವು (2) ಪ್ರತ್ಯಯವು. ಪ್ರತ್ಯಯದಲ್ಲಿಯೂ ಎರಡು ಅಂಶಗಳಿಗೆ. ಆಖ್ಯಾತತ್ವ ಮತ್ತು ಲಿಙ್ತ್ವ. ಆಖ್ಯಾತತ್ವವು ಹತ್ತೂ ಲಕಾರಗಳಲ್ಲಿರುವುದು. ಲಿಙ್ತ್ವವು ಲಿಙ್‌ನಲ್ಲಿ ಮಾತ್ರ

ಇರುವುದು. ಈ ಎರಡೂ ಅಂಶಗಳಿಂದಲೂ ಭಾವನೆಯೇ ಹೇಳಲ್ಪಡುತ್ತವೆ. ಭಾವನಾ ಎಂದರೆ 'ಆಗಬೇಕಾದುದು' 'ಆಗಲು ಅನುಕೂಲವಾಗುವ ಅದನ್ನು ಮಾಡಲು ಹೊರಟವನ ಪ್ರಯತ್ನವು, (ಭಾವನಾ ನಾಮ ಭವಿತುಃ ಭವನಾನು-ಕೂಲಃ ಭಾವಯಿತುಃ ವ್ಯಾಪಾರ ವಿಶೇಷಃ). ಭಾವನೆಯು ಎರಡು ವಿಧವಾಗಿದೆ. (1) ಶಾಬ್ದೀಭಾವನಾ (2) ಆರ್ಥೀಭಾವನಾ.

## (7,8) ಶಾಬ್ದೀಭಾವನಾ

ಪುರುಷನ ಪ್ರವೃತ್ತಿಗೆ ಅನುಕೂಲವಾದ ಪ್ರವರ್ತಕನ ವ್ಯಾಪಾರವಿಶೇಷವು 'ಶಾಬ್ದೀಭಾವನಾ.' ಇದು ಲಿಙ್‍ತ್ವಾಂಶದಿಂದ ಹೇಳಲ್ಪಡುತ್ತದೆ. ಲಿಙ್‍ಪ್ರತ್ಯಯ-ವಿರುವ ಕ್ರಿಯಾಪದವನ್ನು ಕೇಳಿದಾಗ ಇದನ್ನು ಹೇಳಿದವನು ನಾನು ಪ್ರವೃತ್ತಿಯನ್ನು ಮಾಡಬೇಕೆಂದು ಪ್ರೇರಿಸುವನು ಎಂದರೆ ಈ ಮಾತನ್ನು ಹೇಳಿದವನು 'ನನ್ನ ಪ್ರವೃತ್ತಿಗೆ ಅನುಕೂಲವಾದ ವ್ಯಾಪಾರವುಳ್ಳವನಾಗಿರುವನು,' ಎಂದು ತಿಳಿದು-ಬರುತ್ತದೆ. ಯಾವ ಶಬ್ದದಿಂದ ಯಾವ ಅರ್ಥವು ತಪ್ಪದೇ ತಿಳಿದುಬರುತ್ತದೆಯೋ ಅದು ಆ ಶಬ್ದದ ವಾಚ್ಯಾರ್ಥವು. ಉದಾಹರಣೆಗೆ 'ಗಾಮಾನಯ' ಎಂಬ ವಾಕ್ಯದಲ್ಲಿರುವ ಗೋಶಬ್ದಕ್ಕೆ ಗೋತ್ವ ಎಂದರ್ಥವು.

## (9) ಶಾಬ್ದೀಭಾವನೆಯ ಲೌಕಿಕ ಮತ್ತು ವೈದಿಕ ಎಂಬ ಎರಡು ಭೇದಗಳು :

ಶಾಬ್ದೀಭಾವನಾ ಎಂಬ ವ್ಯಾಪಾರವಿಶೇಷವು ಲೌಕಿಕ ವಾಕ್ಯಗಳಲ್ಲಿ ಮಾತನಾಡುವ ಪುರುಷನ ಅಭಿಪ್ರಾಯ ವಿಶೇಷವು. ವೈದಿಕವಾಕ್ಯದಲ್ಲಿ ಪುರುಷನು ಇಲ್ಲದಿರು-ವುದರಿಂದ ಲಿಙ್ ಶಬ್ದದಲ್ಲಿರುವ ವ್ಯಾಪಾರವಿಶೇಷವು. ಆದ್ದರಿಂದಲೇ ಇದಕ್ಕೆ 'ಶಾಬ್ದೀಭಾವನಾ' ಎಂದು ಹೆಸರು.

## (10) ಶಬ್ದಭಾವನೆಯ ಮೂರು ಅಂಶಗಳು :

ಶಬ್ದಭಾವನೆಯು (i) ಸಾಧ್ಯ (ii) ಸಾಧನ (iii) ಇತಿಕರ್ತವ್ಯತಾ ಎಂಬ ಮೂರು ಅಂಶಗಳುಳ್ಳದ್ದಾಗಿದೆ. ಇದನ್ನು 'ಕಿಂ ಭಾವಯೇತ್' 'ಏನನ್ನು ಪಡೆಯಬೇಕು' 'ಕೇನ ಭಾವಯೇತ್' 'ಯಾವುದರಿಂದ ಪಡೆಯಬೇಕು' 'ಕಥಂ ಭಾವಯೇತ್' ಹೇಗೆ ಪಡೆಯಬೇಕು, ಎಂದು ವಿವರಿಸಲಾಗುವುದು. ಇವುಗಳಲ್ಲಿ ಸಾಧ್ಯದ ಆಕಾಂಕ್ಷೆ-ಯನ್ನು ಮಾಡಿದಾಗ ಮುಂದೆ ಹೇಳಲಿರುವ, ಅಂಶತ್ರಯಗಳಲ್ಲಿರುವ ಆರ್ಥೀ-ಭಾವನೆಯು ಸಾಧ್ಯವಾಗಿ ಅನ್ವಯಿಸುವುದು. ಒಂದೇ ಪ್ರತ್ಯಯದಿಂದ ತಿಳಿದು-ಬರುವುದರಿಂದ ಇದಕ್ಕೆ 'ಸಮಾನಾಭಿದಾನ'ವುಳ್ಳದ್ದಾಗಿರುವುದು. ಸಂಖ್ಯಾದಿಗಳೂ ಕೂಡ ಪ್ರತ್ಯಯಗಳಿಂದ ತಿಳಿದುಬಂದರೂ ಅವು ಸಾಧ್ಯವೆಂದು ಅನ್ವಯಿಸಲು

ಯೋಗ್ಯವಾಗಿಲ್ಲ. (ii) ಸಾಧನದ ಆಕಾಂಕ್ಷೆಯನ್ನು ಮಾಡಲು ಲಿಙಾದಿಜ್ಞಾನವು ಕರಣವಾಗಿ ಅನ್ವಯಿಸುವುದು. ಇಲ್ಲಿ ಕರಣವೆಂದರೆ ಆರ್ಥೀಭಾವನೆಯ ಉತ್ಪಾದಕ ಎಂಬ ಅಭಿಪ್ರಾಯದಿಂದಲ್ಲ. ಏಕೆಂದರೆ 'ಆರ್ಥೀಭಾವನೆಯು ಕರಣದ ವ್ಯಾಪಾರ-ವಾಗುವುದಕ್ಕಿಂತ ಮೊದಲು ಶಬ್ದದಲ್ಲಿರುವುದು. ಆದರೆ ಇದು ಶಬ್ದಭಾವನೆಯ ಭಾವನ್ನುಂಟುಮಾಡುವುದು ಎಂಬರ್ಥದಲ್ಲಿ ಲಿಙಾದಿ ಜ್ಞಾನವು ಕರಣವಾಗಿರುವುದು.

(iii) ಇತಿ ಕರ್ತವ್ಯತಾಕಾಂಕ್ಷೆಗೆ ಅರ್ಥವಾದದಿಂದ ತಿಳಿದುಬರುವ ಪ್ರಾಶಸ್ತ್ಯವು ಇತಿಕರ್ತವ್ಯತಾ ಎಂದಾಗಿ ಅನ್ವಯಿಸುವುದು.

## (11) ಆರ್ಥೀಭಾವನೆಯ ಲಕ್ಷಣ

ಪ್ರಯೋಜನದ ಇಚ್ಛೆಯಿಂದುಂಟಾದ ಕ್ರಿಯಾವಿಷಯಕ ವ್ಯಾಪಾರವು ಆರ್ಥೀಭಾವನೆಯು. ಇದು ಆಖ್ಯಾತತ್ವಾಂಶದಿಂದ ಹೇಳಲ್ಪಡುವುದು. ಏಕೆಂದರೆ ಎಲ್ಲ ಆಖ್ಯಾತಗಳೂ ವ್ಯಾಪಾರವನ್ನು ಹೇಳುವುವು.

## (12) ಆರ್ಥೀಭಾವನೆಯ ಮೂರು ಅಂಶಗಳು.

ಆರ್ಥೀಭಾವನೆಯು (i) ಸಾಧ್ಯ (ii) ಸಾಧನ (iii) ಇತಿಕರ್ತವ್ಯತಾ ಎಂಬ ಮೂರು ಅಂಶಗಳನ್ನು ಅಪೇಕ್ಷಿಸುತ್ತದೆ. ಈ ಮೂರೂ ಅಂಶಗಳನ್ನೂ ಕಿಂ ಭಾವಯೇತ್,' ಏನನ್ನು ಪಡೆಯಬೇಕು 'ಕೇನ ಭಾವಯೇತ್' ಏತರಿಂದ ಪಡೆಯಬೇಕು 'ಕಥಂ ಭಾವಯೇತ್' ಹೇಗೆ ಪಡೆಯಬೇಕು ಎಂಬ ಪ್ರಶ್ನೆಗಳಿಂದ ತಿಳಿಯಬೇಕು.

(i) ಸಾಧ್ಯದ ಆಕಾಂಕ್ಷೆಯನ್ನು ಮಾಡಿದಾಗ ಸ್ವರ್ಗಾದಿ ಫಲವು ಸಾಧ್ಯವಾಗಿ ಅನ್ವಯಿಸುತ್ತದೆ. ಸಾಧನದ ಆಕಾಂಕ್ಷೆಯನ್ನು ಮಾಡಿದಾಗ ಯಾಗಾದಿಗಳು ಕರಣವಾಗಿ ಅನ್ವಯಿಸುತ್ತವೆ. ಇತಿಕರ್ತವ್ಯತಾ ಆಕಾಂಕ್ಷೆಯನ್ನು ಮಾಡಿದಾಗ ಪ್ರಯಾಜಾದಿ ಅಂಗಗಳು ಇತಿ ಕರ್ತವ್ಯತಾರೂಪವಾಗಿ ಅನ್ವಯಿಸುತ್ತವೆ.

## (13) ವೇದಲಕ್ಷಣದ ವಿಚಾರ

ವೇದವು ಯಾವುದು ಎಂದು ಕೇಳಿದರೆ ಅದಕ್ಕೆ ಅಪೌರುಷೇಯವಾದ ವಾಕ್ಯವು ವೇದವೆಂದು ಹೇಳುವರು. ಈ ವೇದವು ವಿಧಿ, ಮಂತ್ರ, ನಾಮಧೇಯ, ನಿಷೇಧ, ಅರ್ಥವಾದ ಎಂದು ಐದು ವಿಧವಾಗಿರುವುದು.

## III. ವಿಧಿಪರಿಚಯವು

**14) ವಿಧಿ ಮೀಮಾಂಸಾ :** ತಿಳಿಯದಿರುವ ವಿಷಯವನ್ನು ತಿಳಿಸಿಕೊಡುವ ವೇದದ ಭಾಗವು ವಿಧಿಯು. ಅದು ಪ್ರಮಾಣಾಂತರಗಳಿಂದ ಪ್ರಾಪ್ತವಾಗದಿರುವ ಅರ್ಥದ ವಿಧಾನವನ್ನು ಮಾಡುವುದು. ಅಪ್ರಾಪ್ತವಾದ, ಪ್ರಯೋಜನವಿರುವ ಅರ್ಥವನ್ನು ವಿಧಾನ ಮಾಡುವುದರಿಂದ ವಿಧಿಯು ಅರ್ಥವತ್ತಾಗುವುದು. ಉದಾಹರಣೆ 'ಅಗ್ನಿಹೋತ್ರಂ ಜುಹುಯಾತ್ ಸ್ವರ್ಗಕಾಮ,' (ಮೈ.ಸಂ.1.8.6) ಸ್ವರ್ಗವನ್ನು ಅಪೇಕ್ಷಿಸುವವನು ಅಗ್ನಿಹೋತ್ರಯಾಗವನ್ನು ಮಾಡಬೇಕು ಎಂಬ ವಿಧಿಯು ಪ್ರಮಾಣಾಂತರದಿಂದ ಪ್ರಾಪ್ತವಾಗದಿರುವ ಸ್ವರ್ಗರೂಪಪ್ರಯೋಜನ-ವಿರುವ ಹೋಮದ ವಿಧಾನವನ್ನು ಮಾಡುತ್ತದೆ. ಅಗ್ನಿಹೋತ್ರ ಹೋಮದಿಂದ ಸ್ವರ್ಗವನ್ನು ಪಡೆಯಬೇಕು ಎಂದು ವಾಕ್ಯಾರ್ಥದ ಬೋಧವಾಗುವುದು.

**15) ಗುಣವಿಧಿ :** ಕರ್ಮವು ಪ್ರಮಾಣಾಂತರದಿಂದ ಪ್ರಾಪ್ತವಾಗಿದ್ದು ಆ ಕರ್ಮವನ್ನುದ್ದೇಶಿಸಿ ಗುಣವನ್ನು ಮಾತ್ರ ವಿಧಾನ ಮಾಡುವುದು ಗುಣವಿಧಿಯು. 'ದಧ್ನಾಜುಹೋತಿ' ಎಂಬಲ್ಲಿ 'ಅಗ್ನಿಹೋತ್ರಂ ಜುಹುಯಾತ್' ಎಂಬ ವಿಧಿಯಿಂದ ಪ್ರಾಪ್ತವಾದ ಹೋಮವನ್ನು ಉದ್ದೇಶಿಸಿ ದಧಿಯನ್ನು ಮಾತ್ರ ವಿಧಾನ ಮಾಡಿರು-ವುದರಿಂದ ಇದು ಗುಣವಿಧಿಯು. ದಧಿಯಿಂದ ಹೋಮವನ್ನು ಮಾಡಬೇಕು ಎಂದು ವಾಕ್ಯಾರ್ಥಬೋಧವಾಗುವುದು.

**(16) ವಿಶಿಷ್ಟವಿಧಿ :** ಎಲ್ಲಿ ಕರ್ಮ ಮತ್ತು ಗುಣ ಎರಡೂ ಪ್ರಾಪ್ತವಾಗಿರು-ವುದಿಲ್ಲವೋ ಅಲ್ಲಿ ಗುಣವಿಶಿಷ್ಟ ಕರ್ಮದ ವಿಧಾನವನ್ನು ಮಾಡುವುದು ವಿಶಿಷ್ಟ-ವಿಧಿಯು. ಉದಾಹರಣೆ 'ಸೋಮೇನ ಯಜೇತ' ಎಂಬಲ್ಲಿ ಸೋಮ ಮತ್ತು ಯಾಗ ಎರಡೂ ಪ್ರಾಪ್ತವಾಗದಿರುವುದರಿಂದ ಸೋಮವಿಶಿಷ್ಟಯಾಗದ ವಿಧಾನ-ವನ್ನು ಮಾಡಲಾಗಿದೆ. ಸೋಮಪದಕ್ಕೆ ಮತ್ವರ್ಥ ಲಕ್ಷಣಾ ಮಾಡಿ 'ಸೋಮವತಾ ಯಾಗೇನ ಇಷ್ಟಂ ಭಾವಯೇತ್' ಸೋಮವಿರುವ ಯಾಗದಿಂದ ಇಷ್ಟಾರ್ಥವನ್ನು ಪಡೆಯಬೇಕು ಎಂದು ವಾಕ್ಯಾರ್ಥಬೋಧವಾಗುವುದು.

**(17) ವಾಕ್ಯಭೇದ ದೋಷಪರಿಹಾರ**

ಕರ್ಮ ಮತ್ತು ಗುಣ ಎರಡರ ವಿಧಾನ ಮಾಡಿದರೆ ವಾಕ್ಯಭೇದವು ಬರುವುದು ಎಂಬ ಆಕ್ಷೇಪ ಸರಿಯಲ್ಲ. ಇಲ್ಲಿ ಎರಡನ್ನೂ ಪ್ರತ್ಯೇಕವಾಗಿ ವಿಧಾನ ಮಾಡಿಲ್ಲ. ಆದರೆ ಸೋಮ ವಿಶಿಷ್ಟವಾದ ಯಾಗದ ವಿಧಾನವನ್ನು ಮಾಡಲಾಗಿದೆ.

### (18) ಗುಣವಿಧಿತ್ವಾಶಂಕಾಪರಿಹಾರ

'ಜ್ಯೋತಿಷ್ಟೋಮೇನ ಸ್ವರ್ಗಕಾಮಃ ಯಜೇತ,' ಸ್ವರ್ಗದ ಕಾಮನೆಯುಳ್ಳ-ವನು ಜ್ಯೋತಿಷ್ಟೋಮ ಯಾಗ ಮಾಡಬೇಕು ಎಂಬ ವಿಧಿಯಿಂದ ಪ್ರಾಪ್ತವಾದ ಯಾಗದ ಉದ್ದೇಶದಿಂದ 'ಸೋಮರೂಪಗುಣದ ವಿಧಾನ ಮಾಡಬಹುದು' ಸೋಮೇನ ಯಾಗಂ ಭಾವಯೇತ್' ಎಂದು 'ಸೋಮದಿಂದ ಯಾಗವನ್ನು ಮಾಡಬೇಕು' ಎಂದು ಗುಣವಿಧಾನವನ್ನೇ ಮಾಡಬೇಕು. ಮತ್ವರ್ಥ ಲಕ್ಷಣ ಮಾಡುವ ಅಗತ್ಯವಿಲ್ಲ ಎಂಬ ಆಕ್ಷೇಪವು ಸರಿಯಲ್ಲ. ಏಕೆಂದರೆ, ಜ್ಯೋತಿ-ಷ್ಟೋಮೇನ ಸ್ವರ್ಗಕಾಮೋ ಯಜೇತ ಎಂಬುದು ಅಧಿಕಾರವಿಧಿಯು. ಅದು ಉತ್ಪತ್ತಿವಿಧಿಯಲ್ಲ.

### (19) ಜ್ಯೋತಿಷ್ಟೋಮವಿಧಿ

ಜ್ಯೋತಿಷ್ಟೋಮವಿಧಿಯು ಉಭಯ ವಿಧಿಯಾಗಲಿ ಎಂಬ ಆಕ್ಷೇಪವು ಸರಿಯಲ್ಲ. 'ಉದ್ಭಿದಾ ಯಜೇತ ಪಶುಕಾಮಃ' (ಶ.ಬ್ರಾ.19.7.2) (ತಾಂ) ಎಂಬ ವಿಧಿಯಂತೆ ಜ್ಯೋತಿಷ್ಟೋಮೇನ ಇತ್ಯಾದಿಯಾದ ವಿಧಿಯು ಉತ್ಪತ್ತಿವಿಧಿ ಮತ್ತು ಅಧಿಕಾರವಿಧಿ ಎರಡೂ ಆಗಲಿ ಎಂಬ ಆಕ್ಷೇಪವು ಸರಿಯಲ್ಲ. ನೀವು ಹೇಳಿರುವ ದೃಷ್ಟಾಂತದಲ್ಲಿ ಬೇರೆ ಉತ್ಪತ್ತಿವಾಕ್ಯವಿಲ್ಲದಿರುವುದರಿಂದ ಅಲ್ಲಿ ಉಭಯವಿಧಿತ್ವ ಅನ್ವಯಿಸುವುದಿಲ್ಲ. ಅಲ್ಲದೆ ಜ್ಯೋತಿಷ್ಟೋಮೇನ ಇತ್ಯಾದಿಯಲ್ಲಿ ಉಭಯ-ವಿಧಿತ್ವವನ್ನು ಅಂಗೀಕರಿಸಿದರೆ ಈ ವಾಕ್ಯದಿಂದಲೇ ಯಾಗ ಮತ್ತು ಫಲಸಂಬಂಧ ಎರಡನ್ನೂ ತಿಳಿಸಬೇಕಾಗಿ ಬಂದು ವಾಕ್ಯಭೇದವು ದೃಢವಾಗುವುದು. ಆದ್ದರಿಂದ ಸೋಮಪದದಲ್ಲಿ ಮತ್ವರ್ಥಲಕ್ಷಣ ಮಾಡಿ ವಿಶಿಷ್ಟವಿಧಾನವನ್ನೂ ಮಾಡುವುದೇ ಉಚಿತವು.

### 20) ವಿಧಿಯು ನಾಲ್ಕು ವಿಧವಾಗಿರುವುದು.

(i) ಉತ್ಪತ್ತಿವಿಧಿ (ii) ವಿನಿಯೋಗ ವಿಧಿ (iii) ಅಧಿಕಾರವಿಧಿ (iv) ಪ್ರಯೋಗವಿಧಿ.

21) ಉತ್ಪತ್ತಿವಿಧಿ : ಯಾವವಿಧಿಯು ಕರ್ಮದ ಸ್ವರೂಪವನ್ನು ಮಾತ್ರ ತಿಳಿಸುವುದೋ ಅದು ಉತ್ಪತ್ತಿವಿಧಿ. ಉದಾಹರಣೆ 'ಅಗ್ನಿಹೋತ್ರಂ ಜುಹೋತಿ' (ಮೈ.ಸಂ.1.8.6) ಈ ವಿಧಿಯಲ್ಲಿ ಕರ್ಮವು ಕರಣವಾಗಿ ಅನ್ವಯಿಸುವುದು. ಅಗ್ನಿಹೋತ್ರಹೋಮದಿಂದ ಇಷ್ಟವಾದದ್ದನ್ನು ಪಡೆಯಬೇಕು ಎಂದು ವಾಕ್ಯಾರ್ಥ ಬೋಧವಾಗುವುದು.

## 22) ಯಾಗದ ಎರಡು ರೂಪಗಳು

ಯಾಗಕ್ಕೆ ದ್ರವ್ಯ ಮತ್ತು ದೇವತಾ ಎಂದು ಎರಡು ರೂಪಗಳಿರುವುವು. ಅಗ್ನಿಹೋತ್ರಂ ಜುಹೋತಿ ಎಂಬ ವಿಧಿಯಲ್ಲಿ ಈ ಎರಡೂ ರೂಪಗಳು ಕಂಡು-ಬರುವುದಿಲ್ಲ. ಆದ್ದರಿಂದ ಇದು ಉತ್ಪತ್ತಿವಿಧಿಯಾಗಲಾರದು. ಅಗ್ನಿಹೋತ್ರ ಶಬ್ದವು ತತ್ಪ್ರಖ್ಯನ್ಯಾಯದಿಂದ ನಾಮಧೇಯವಾಗಿದೆ ಎಂಬ ಆಕ್ಷೇಪವೂ ಸರಿಯಲ್ಲ. ರೂಪವು ಇಲ್ಲದಿದ್ದರೂ ಇದು ಉತ್ಪತ್ತಿವಿಧಿಯೇ ಆಗಿರುವುದು. ರೂಪವನ್ನು ಹೇಳಿದ ಮಾತ್ರದಿಂದ ಉತ್ಪತ್ತಿವಿಧಿಯೆಂದು ಹೇಳುವುದಾದರೆ 'ದಧ್ನಾ ಜುಹೋತಿ,' ಮೊಸರಿನಿಂದ ಹೋಮ ಮಾಡುವರು ಎಂಬ ವಿಧಿಯು ಅದರಲ್ಲಿ ದ್ರವ್ಯವನ್ನು ಹೇಳಿದ್ದರಿಂದ ಉತ್ಪತ್ತಿವಿಧಿಯಾಗುವ ಪ್ರಸಂಗ ಬರುವುದು. 'ಅಗ್ನಿಹೋತ್ರಂ ಜುಹೋತಿ' ಎಂಬುದು ಉತ್ಪತ್ತಿವಿಧಿಯಾಗದಿದ್ದರೆ ಈ ವಾಕ್ಯವೇ ನಿರರ್ಥಕ-ವಾಗುವುದು.

## 23) ವಿನಿಯೋಗವಿಧಿ

ಅಂಗ ಮತ್ತು ಪ್ರಧಾನಗಳ ಸಂಬಂಧವನ್ನು ಹೇಳುವ ವಿಧಿಯು ವಿನಿಯೋಗ-ವಿಧಿಯು. ಉದಾಹರಣೆ 'ದಧ್ನಾ ಜುಹೋತಿ' (ಆಪ.ಶ್ರೌ.ಸೂ.6.25) ಮೊಸರಿ-ನಿಂದ ಹೋಮ ಮಾಡುವನು ಎಂಬ ವಿಧಿಯಲ್ಲಿ ದಧ್ನಾ ಎಂಬ ತೃತೀಯಾವಿಭಕ್ತಿ-ಯಿಂದ ಅಂಗವಾಗಿರುವ ದಧಿಯ ಪ್ರಧಾನವಾದ ಹೋಮದೊಡನೆ ಸಂಬಂಧ-ವನ್ನು ಹೇಳಲಾಗಿದೆ. 'ದಧ್ನಾ ಹೋಮಂ ಭಾವಯೇತ್' ಎಂದರೆ ದಧಿಯಿಂದ ಹೋಮವನ್ನು ಮಾಡಬೇಕು ಎಂದು ಅರ್ಥವಾಗುವುದು.

**24)** ವಿನಿಯೋಗವಿಧಿಯು ಶ್ರುತಿ ಮೊದಲಾದುವುಗಳಿಂದ ಅನ್ವಯವನ್ನು ಮಾಡುವುದು. ವಿನಿಯೋಗವಿಧಿಗೆ ಸಹಕಾರಿಯಾದ ಆರು ಪ್ರಮಾಣಗಳು. ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯ. ಇವುಗಳ ಸಹಕಾರದಿಂದ ವಿನಿಯೋಗ ವಿಧಿಯ ಅಂಗತ್ವವನ್ನು ತಿಳಿಸುತ್ತದೆ. ಅಂಗದ ಲಕ್ಷಣವನ್ನು ಇನ್ನೊಂದನ್ನು ಉದ್ದೇಶಿಸಿ ಪ್ರವೃತ್ತವಾದ ಕ್ರತಿಯಿಂದ ಸಾಧ್ಯವಾಗುವುದು. ಅಥವಾ ಪರಾರ್ಥವಾಗುವುದು.

## 25) ಶ್ರುತಿನಿರ್ವಚನ

ಅಂಗತ್ವವನ್ನು ತಿಳಿಸಲು ಪ್ರಮಾಣಾಂತರದ ಅಪೇಕ್ಷೆಯಿಲ್ಲದೆ ಇರುವ ಶಬ್ದವು ಶ್ರುತಿ. ಅದು ಮೂರು ವಿಧವಾಗಿದೆ– i) ವಿಧಾತ್ರೀ - ವಿಧಾನ ಮಾಡುವುದು (ii) ಅಭಿಧಾತ್ರೀ - ಅಂಗತ್ವವನ್ನು ಹೇಳುವಂಥದು (iii) ವಿನಿಯೋಕ್ತ್ರೀ - ಅಂಗತ್ವದ

ವಿನಿಯೋಗವನ್ನು ತಿಳಿಸುವುದು. (i) ಲಿಙಾದಿಶಬ್ದಗಳು ಮೊದಲನೆಯ ಪ್ರಕಾರದವು ಎಂದರೆ, ಅಂಗತ್ವದ ವಿಧಾನ ಮಾಡುವಂಥವು (ii) ವ್ರೀಹೀನ್ ಪ್ರೋಕ್ಷತಿ - ವ್ರೀಹಿಗೆ ಪ್ರೋಕ್ಷಣೆ ಮಾಡಬೇಕು ಎಂಬುದು ಎರಡನೆಯ ಗುಂಪಿಗೆ ಸೇರಿದ್ದು, (iii) ಶಬ್ದದ ಶ್ರವಣ ಮಾತ್ರದಿಂದ ಅಂಗಾಂಗಗಳ ಸಂಬಂಧವನ್ನು ತಿಳಿಸುವಂಥದು ಮೂರನೆಯದು.

**26) ವಿನಿಯೋಕ್ತ್ರೀಶ್ರುತಿಯ ಮೂರು ಪ್ರಕಾರಗಳು.**

(i) ವಿಭಕ್ತಿರೂಪವಾದುದು (ii) ಏಕಾಭಿಧಾನರೂಪವಾದುದು (iii) ಏಕಪದ-ರೂಪವಾದುದು.

**27) ತೃತೀಯಾವಿಭಕ್ತಿರೂಪದ ಶ್ರುತಿಯ ಉದಾಹರಣೆ**

ವಿಭಕ್ತಿಶ್ರುತಿಯಿಂದ ಅಂಗತ್ವವನ್ನು ತಿಳಿಸುವ ಉದಾಹರಣೆಯು, ವ್ರೀಹಿಭಿಃ ಯಜೇತ! (ಆಪ.ಶ್ರೌ.ಸೂ. 6.31.24) ಇಲ್ಲಿ ತೃತೀಯಾಶ್ರುತಿಯಿಂದ ವ್ರೀಹಿಯು ಯಾಗದ ಅಂಗವೆಂದು ತಿಳಿಸಲಾಗಿದೆ. ಈ ಅಂಗತ್ವವು ಪುರೋಡಾಶಕ್ಕೆ ಪ್ರಕೃತಿಯಾದುದರಿಂದ ಆಗಿದೆ. ಇದಕ್ಕೆ ಒಂದು ಉದಾಹರಣೆ ಹೀಗಿದೆ– ಪಶುವು ಹೃದಯಾದಿರೂಪ ಹವಿಸ್ಸಿಗೆ ಪ್ರಕೃತಿಯಾಗಿ ಯಾಗದ ಅಂಗವಾದಂತೆ.

ಅರುಣಿಯಾ ಏಕಹಾಯನ್ಯಾ ಗವಾ ಸೋಮಂ ಕ್ರೀಣಾತಿ (ತೈ.ಸಂ.7.1.6.2), ಅರುಣ ಬಣ್ಣದ ಒಂದು ವರ್ಷದ ಹಸುವಿನಿಂದ ಸೋಮವನ್ನು ಖರೀದಿಸುತ್ತಾನೆ.' ಈ ವಾಕ್ಯದಲ್ಲಿ ಆರುಣ್ಯವು ತೃತೀಯಾ ವಿಭಕ್ತಿಶ್ರುತಿಯಿಂದ ಕ್ರಯಕ್ಕೆ ಅಂಗವಾಗಿದೆ ಎಂದು ಹೇಳಿದೆ. ಇದೂ ಕೂಡ ಗೋರೂಪದ್ರವ್ಯದ ಪರಿಚ್ಛೇದ ದ್ವಾರದಿಂದ ಅಂಗವಾಗಿದೆ. ಆರುಣ್ಯವು ಅಮೂರ್ತವಾದ್ದರಿಂದ ಸಾಕ್ಷಾತ್ತಾಗಿ ಅಂಗವಾಗ-ಲಾರದು.

**28)** ದ್ವಿತೀಯಾ ವಿಭಕ್ತಿರೂಪಶ್ರುತಿಯು ವಿನಿಯೋಕ್ತ್ರಿಯಾಗಿರುವ ಉದಾಹರಣೆ– 'ವ್ರೀಹೀನ್ ಪ್ರೋಕ್ಷತಿ' (ತೈ.ಬ್ರಾ. 3.2.5.4) ಇಲ್ಲಿ ದ್ವಿತೀಯಾ-ಶ್ರುತಿಯಿಂದ ಪ್ರೋಕ್ಷಣವು ವ್ರೀಹಿಯ ಅಂಗವೆಂದು ಹೇಳಲಾಗಿದೆ. ಈ ಪ್ರೋಕ್ಷಣವು ವ್ರೀಹಿಯ ಸ್ವರೂಪವನ್ನು ರೂಪಿಸುವುದಕ್ಕಾಗಿ ಅಲ್ಲ, ಏಕೆಂದರೆ ವ್ರೀಹಿಯ ಸ್ವರೂಪವು ಪ್ರೋಕ್ಷಣವಿಲ್ಲದೇ ಸಿದ್ಧವಾಗಿದೆ. ವ್ರೀಹಿಯನ್ನು ಅಪೂರ್ವದ ಸಾಧನವನ್ನಾಗಿ ಮಾಡಲು ಈ ಪ್ರೋಕ್ಷಣವಿದೆ. ವ್ರೀಹಿಗೆ ಪ್ರೋಕ್ಷಣ-ವನ್ನು ಮಾಡದೆ ಯಾಗದ ಅನುಷ್ಠಾನ ಮಾಡಿದರೆ ಅಪೂರ್ವವುಂಟಾಗುವುದಿಲ್ಲ.

ಇದೇ ರೀತಿಯಾಗಿ ಎಲ್ಲ ಅಂಗಗಳಲ್ಲಿಯೂ ಅಪೂರ್ವಪ್ರಯುಕ್ತವಾಗಿ ಅಂಗತ್ವವು ಬರುವುದು ಎಂದು ತಿಳಿಯಬೇಕು.

ದ್ವಿತೀಯಾವಿಭಕ್ತಿ ಶ್ರುತಿಯಿಂದ ವಿನಿಯೋಗವನ್ನು ಹೇಳುವ ಇನ್ನೊಂದು ಉದಾಹರಣೆ

'ಇಮಾಂ ಅಗೃಭ್ಣನ್ ರಶನಾಮೃತಸ್ಯ' ಇತಿ ಅಶ್ವಾಭಿಧಾನೀಂ ಆದತ್ತೇ (ತೈ.ಸಂ.5.1.2.1) ಈ ಮಂತ್ರವು ದ್ವಿತೀಯಾಶ್ರುತಿಯಿಂದ ಅಶ್ವಾಭಿಧಾನಿಗೆ ಅಂಗವಾಗಿದೆ.

ಸಪ್ತಮೀ ವಿಭಕ್ತಿ ಶ್ರುತಿಯಿಂದ ವಿನಿಯೋಗವನ್ನು ಹೇಳುವ ಉದಾಹರಣೆ. 'ಯದಾಹವನೀಯೇ ಜುಹೋತಿ.' (ತೈ.ಬ್ರಾ. 1.1.10.5) ಇಲ್ಲಿ ಸಪ್ತಮೀಶ್ರುತಿಯ ಆಹವನೀಯ ಅಂಗಕ್ಕೆ ಹೋಮವಾಗಿದೆ ಎಂದು ತಿಳಿಸುತ್ತದೆ. ಇದೇ ರೀತಿಯಾಗಿ ವಿಭಕ್ತಿ ಶ್ರುತಿಯಿಂದಾಗುವ ಇನ್ನಿತರ ವಿನಿಯೋಗಗಳನ್ನು ತಿಳಿಯಬೇಕು.

**28) ಏಕಾಭಿಧಾನಶ್ರುತಿ**

'ಪಶುನಾ ಯಜೇತ' (ತೈ.ಸಂ.6.1.11.6) (ಮಾ.ಶ್ರೌ.ಸೂ.1.8.6.24) ಇಲ್ಲಿ ಏಕತ್ವ ಮತ್ತು ಪುಂಸ್ತ್ವಗಳು ಸಮಾನಾಭಿಧಾನಶ್ರುತಿಯಿಂದ ಕಾರಕಕ್ಕೆ ಎಂದರೆ ಪಶುರೂಪದ್ರವ್ಯಕ್ಕೆ ಅಂಗಗಳಾಗಿವೆ.

**29) ಏಕಪದಶ್ರುತಿ** : 'ಯಜೇತ' ಎಂಬಲ್ಲಿಯ ಆಖ್ಯಾತದಿಂದ ಹೇಳಲ್ಪಟ್ಟ ಸಂಖ್ಯೆಯು ಸಮಾನಾಭಿಧಾನಶ್ರುತಿಯಿಂದ ಭಾವನೆಯ ಅಂಗವಾಗಿದೆ. ಏಕಪದಶಬ್ದದಿಂದ ಯಾಗದ ಅಂಗವಾಗಿದೆ.

**30) ಅಮೂರ್ತವಾದದ್ದು ಭಾವನೆಯ ಅಂಗವಾಗಬಹುದು.**

ಅಮೂರ್ತವಾದ ಸಂಖ್ಯೆಯು ಭಾವನೆಯ ಅಂಗವಾಗುವುದು ಹೇಗೆ? ಎಂಬ ಆಕ್ಷೇಪವು ಸರಿಯಲ್ಲ. ಅರ್ಥಭಾವನಾ ರೂಪವ್ಯಾಪಾರವುಳ್ಳ ಯಾಗದ ಕರ್ತನ ಪರಿಚ್ಛೇದದ್ವಾರದಿಂದ ಸಂಖ್ಯೆಯು ಭಾವನೇಯ ಅಂಗವಾಗಬಹುದು.

**31) ಆಖ್ಯಾತವಾಚ್ಯವಾದ ಭಾವನೆಯು ಆಕ್ಷೇಪದಿಂದ ಕರ್ತೃವನ್ನು ತಿಳಿಸುವುದು.**

**32) ಶ್ರುತಿಯು ಲಿಙ್ಗಾದಿಗಳಿಗಿಂತ ಪ್ರಬಲವಾದುದು.**

ಲಿಙ್ಗಾದಿಗಳಲ್ಲಿ ವಿನಿಯೋಜಕ ಶಬ್ದವು ಪ್ರತ್ಯಕ್ಷವಾಗಿರುವುದಿಲ್ಲ. ಆದರೆ ಅದನ್ನು

ಕಲ್ಪಿಸಬೇಕಾಗುವುದು. ಹೀಗೆ ವಿನಿಯೋಜಕ ಶಬ್ದವನ್ನು ಕಲ್ಪಿಸುವ ಮೊದಲೇ ಪ್ರತ್ಯಕ್ಷಶ್ರುತಿಯಿಂದ ವಿನಿಯೋಗವು ಆಗುವುದರಿಂದ ಲಿಜಾದಿಗಳ ಕಲ್ಪಕತ್ವ-ಶಕ್ತಿಯು ಕುಂಠಿತವಾಗಿ ಹೋಗುತ್ತದೆ. ಆದ್ದರಿಂದಲೇ ಐಂದ್ರ್ಯ ಇತ್ಯಾದಿ ಮಂತ್ರ-ದಲ್ಲಿಯ ಇಂದ್ರಲಿಂಗದಿಂದ ಆ ಮಂತ್ರವು ಇಂದ್ರನ ಉಪಸ್ಥಾನಾರ್ಥವಾಗಿ ಆಗುವುದಿಲ್ಲ. 'ಆದರೆ' ಐಂದ್ರ್ಯಾಗಾರ್ಹಪತ್ರ.... ಪತಿಷ್ಠತೇ.' (ಮೈ.ಸಂ.3.2.4) ಎಂಬ ಮಂತ್ರದಲ್ಲಿಯ ಗಾರ್ಹಪತ್ಯಂ ಎಂಬ ದ್ವಿತೀಯಾಶ್ರುತಿಯಿಂದ ಗಾರ್ಹಪತ್ಯದ ಉಪಸ್ಥಾನಕ್ಕಾಗಿ ಇರುವುದು.

### 33) ಲಿಂಗನಿರ್ವಚನ

ಶಬ್ದದ ಸಾಮರ್ಥ್ಯವು ಲಿಂಗವು. 'ಸಾಮರ್ಥ್ಯಂ ಸರ್ವಶಬ್ದಾನಾಂ ಲಿಂಗ-ಮಿತ್ಯಭಿಧೀಯತೇ' ಶಬ್ದಗಳ ಸಾಮರ್ಥ್ಯವೇ ಲಿಂಗವು ಎನ್ನಲಾಗಿದೆ.(ಕಂ.ವಾ.225) (ನ್ಯಾಯರತ್ನಮಾಲಾ 131) ಸಾಮರ್ಥ್ಯವೆಂದರೆ ರೂಢಿಯು. ಆದ್ದರಿಂದ ಲಿಂಗವು ಸಮಾಖ್ಯಾದಿಂದ ಭಿನ್ನವಾಗಿದೆ. ವೈದಿಕಶಬ್ದರೂಪವಾದ ಸಮಾಖ್ಯಾದಿಂದ ರೂಢಿ-ರೂಪವಾದ ಲಿಂಗದ ಶಬ್ದವು ಭಿನ್ನವಾಗಿದೆ. ಆದ್ದರಿಂದ 'ಬರ್ಹಿಃ ದೇವಸದನಂ ದಾಮಿ' (ಮೈ.ಸಂ. 1.1.2) ಎಂಬ ಮಂತ್ರವು ಕುಶಗಳ ಲವನಕ್ಕೆ ಎಂದರೆ ಕುಶಗಳನ್ನು ಕತ್ತರಿಸುವ ಅಂಗವು. ಉಲೂಪಾದಿಗಳ ಲವನಕ್ಕೆ ಅಂಗವಲ್ಲ. ಈ ಮಂತ್ರವು ಬರ್ಹಿರ್ದಾಮಿ ಎಂಬ ಲಿಂಗದಿಂದ ಬರ್ಹಿಗಳ ಲವನದ ಪ್ರಕಾಶವನ್ನು ಮಾಡಲು ಸಮರ್ಥವಾಗಿದೆ. ಇದೇ ರೀತಿಯಾಗಿ ಲಿಂಗದಿಂದ ವಿನಿಯೋಗವನ್ನು ಇನ್ನಿತರ ಕಡೆಗಳಲ್ಲಿ ತಿಳಿಯಬೇಕು. ಲಿಂಗವು ವಾಕ್ಯಾದಿಗಳಿಗಿಂತ ಪ್ರಬಲವಾಗಿದೆ. ಆದ್ದರಿಂದಲೇ ಸ್ಯೋನಂ ತೇ ಸದನಂ ಕೃಣೋಮಿ (ಮಾ.ಶ್ರೌ.ಸಂ.1.2.6.19), (ತೈ.ಬ್ರಾ.3.7.5.2-3) ಎಂಬ ಮಂತ್ರವು ಪುರೋಡಾಶಕ್ಕೆ ಸದನವನ್ನು ಮಾಡು-ವುದರ ಅಂಗವು 'ಸದನಂ ಕೃಣೋಮಿ' ಎಂಬ ಲಿಂಗವಿರುವುದು. ಇಲ್ಲಿ ವಾಕ್ಯದಿಂದ ವಿನಿಯೋಗವಾಗುವುದಿಲ್ಲ.

### 34) ವಾಕ್ಯದ ನಿರ್ವಚನ

ಸಮಭಿವ್ಯಾಹಾರವು ವಾಕ್ಯವು. ಸಮಭಿವ್ಯಾಹಾರವೆಂದರೆ ಸಾಧ್ಯತ್ವಾದಿಗಳನ್ನು ಹೇಳುವ ದ್ವಿತೀಯಾ ವಿಭಕ್ತ್ಯಾದಿಗಳಲ್ಲದಿದ್ದರೂ ಅಂಗಾಂಗವಾಚಕಪದಗಳನ್ನು ಜೊತೆಯಾಗಿ ಹೇಳುವುದು. ಉದಾಹರಣೆ- ಯಸ್ಯ ಪರ್ಣಮಯೀ ಜುಹುಃ ಭವತಿ ನ ಸಃ ಪಾಪಂ ಶ್ಲೋಕಂ ಶ್ರುಣೋತಿ । (ತೈ.ಸಂ.3.5.7.2) ಇಲ್ಲಿ ಪರ್ಣತಾ ಮತ್ತು ಜುಹೂಗಳನ್ನು ಜೊತೆಯಾಗಿ ಹೇಳಿದ್ದರಿಂದ ಪರ್ಣತೆಯು ಜುಹುವಿಗೆ

ಅಂಗವಾಗಿದೆ. ಜುಹೂ ಪರ್ಣತೆಯಿಲ್ಲದೆ ಮೊದಲೇ ಸಿದ್ಧವಾಗಿರುವುದರಿಂದ ಪರ್ಣತೆಯನ್ನು ಅಂಗವೆಂದು ಹೇಳುವುದು ನಿರರ್ಥಕ ಎಂಬ ಆಕ್ಷೇಪವು ಸರಿಯಲ್ಲ. ಇಲ್ಲಿ ಜುಹೂ ಶಬ್ದದಿಂದ ಅದರಿಂದ ಸಾಧ್ಯವಾಗುವ ಅಪೂರ್ವವನ್ನು ಹೇಳಲಾಗಿದೆ. ಪರ್ಣತೆಯಿಂದ ಅವದಾನ ಮಾಡಿದ ಹವಿಸ್ಸಿನ ಧಾರಣದ್ವಾರಾ ಜುಹೂವಿನ ಅಪೂರ್ವವನ್ನು ಪಡೆಯಬೇಕು ಎಂದು ವಾಕ್ಯಾರ್ಥವು. ಹೀಗೆ ಹೇಳಿದಾಗ ಪರ್ಣತೆಯಿಂದ ಜುಹೂವನ್ನು ಮಾಡಿದಾಗಲೇ ಅದರಿಂದ ಸಾಧ್ಯ-ವಾಗುವ ಅಪೂರ್ವವು ಉಂಟಾಗುವುದು ಇಲ್ಲದಿದ್ದರೆ ಇಲ್ಲ. ಆದ್ದರಿಂದ ಪರ್ಣತೆಯು ವ್ಯರ್ಥವಲ್ಲ. ಅವದಾನ ಮಾಡಿದ ಹವಿಸ್ಸಿನ ಧಾರಣ ಮಾಡುವುದ-ರಿಂದ ಎಂದು ಅವಶ್ಯವಾಗಿ ಹೇಳಬೇಕು. ಇಲ್ಲದಿದ್ದರೆ ಸ್ರುವಾದಿಗಳಿಗೂ ಪರ್ಣತೆ-ಯನ್ನು ಹೇಳುವ ಪ್ರಸಂಗ ಬರುವುದು. ಪರ್ಣತೆಯು ಅನಾರಭ್ಯ ಅಧಿಕವಾಗಿದೆ. ಆದ್ದರಿಂದ ಎಲ್ಲ ಪ್ರಕೃತಿಯಾಗಗಳಿಗೂ ಅನ್ವಯಿಸುತ್ತದೆ. ವಿಕೃತಿಯಾಗಗಳಿಗಲ್ಲ. ವಿಕೃತಿಯಾಗಗಳಿಗೆ ಅತಿದೇಶದಿಂದ ಬರುವುದರಿಂದ ಮತ್ತೊಮ್ಮೆ ಹೇಳಿದರೆ ಪುನರುಕ್ತಿಯಾಗುವುದು.

## 35) ಪ್ರಕೃತಿವಿಕೃತಿಲಕ್ಷಣ

ಯಾವ ಯಾಗದಲ್ಲಿ ಎಲ್ಲ ಅಂಗಗಳನ್ನು ಹೇಳಿದ್ದಾರೋ ಅದು ಪ್ರಕೃತಿಯಾಗವು. ಉದಾಹರಣೆಗೆ ದರ್ಶಪೂರ್ಣಮಾಸಾದಿಗಳು. ದರ್ಶಪೂರ್ಣಮಾಸಾದಿಗಳಲ್ಲಿ ಎಲ್ಲ ಅಂಗಗಳನ್ನೂ ಹೇಳಲಾಗಿದೆ. ಯಾವ ಯಾಗದಲ್ಲಿ ಎಲ್ಲ ಅಂಗಗಳನ್ನು ಹೇಳಿಲ್ಲವೋ ಅದು ವಿಕೃತಿಯಾಗುವುದು. ಉದಾಹರಣೆಗೆ ಸೌರ್ಯಾದಿ-ಯಾಗಗಳು. ಸೌರ್ಯಾದಿಯಾಗಗಳಲ್ಲಿ ಕೆಲವು ಅಂಗಗಳನ್ನು ಅತಿದೇಶದಿಂದ ಪಡೆಯಲಾಗುವುದು. ಅನಾರಬ್ಧವಿಧಿ ಎಂದರೆ ಸಾಮಾನ್ಯವಿಧಿಯು.

## 36) ವಾಕ್ಯವು ಪ್ರಕರಣಾದಿಗಳಿಗಿಂತ ಪ್ರಬಲವು.

ವಾಕ್ಯವು ಪ್ರವರಣಾದಿಗಳಿಗಿಂತ ಪ್ರಬಲ. ಆದ್ದರಿಂದಲೇ 'ಇಂದ್ರಾಗ್ನೀ ಇದಂ ಗೃಹಿ' (ತೈ.ಬ್ರಾ. 3.5.10.3) ಎಂಬುದರಲ್ಲಿ ಏಕವಾಕ್ಯತ್ವವಿರುವುದರಿಂದ ಅದು ದರ್ಶದ ಅಂಗವು. ಪ್ರಕರಣದಿಂದ ದರ್ಶಪೂರ್ಣಮಾಸದ ಅಂಗವಲ್ಲ.

## 37) ಪ್ರಕರಣದ ನಿರೂಪಣೆ

ಎರಡಕ್ಕೂ ಆಕಾಂಕ್ಷೆಯಿರುವುದು ಪ್ರಕರಣವು. ಪ್ರಯಾಜಾದಿಗಳಲ್ಲಿ 'ಸಮಿಧೋ ಯಜತಿ' (ತೈ.ಸಂ.2.6.1.1) ಇತ್ಯಾದಿಯಾದ ವಾಕ್ಯಗಳಲ್ಲಿ ಫಲ-ವಿಶೇಷವನ್ನು ಹೇಳದಿರುವುದರಿಂದ 'ಸಮಿದ್ಯಾಗೇನ ಭಾವಯೇತ್,' ಸಮಿದ್ಯಾಗ-

ದಿಂದ ಪಡೆಯಬೇಕು ಎಂದು ಬೋಧವಾದ ಮೇಲೆ 'ಕಿಂ' ಎಂದರೆ ಏನನ್ನು ಪಡೆಯಬೇಕು ಎಂದು ಉಪಕಾರ್ಯದ ಆಕಾಂಕ್ಷೆಯುಂಟಾಗುವುದು. ದರ್ಶ-ಪೂರ್ಣಮಾಸವಾಕ್ಯದಲ್ಲಿಯೂ 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಂ ಭಾವಯೇತ್ (ಆ.ಶ್ರೌ.ಸೂ. 3.14.81) ದರ್ಶಪೂರ್ಣಮಾಸಗಳಿಂದ ಸ್ವರ್ಗ-ವನ್ನು ಪಡೆಯಬೇಕು ಎಂದು ಬೋಧವಾದ ನಂತರ 'ಕಥಂ' ಹೇಗೆ ಎಂಬ ಉಪಕಾರಕ ಆಕಾಂಕ್ಷೆಯೂ ಉಂಟಾಗುವುದು. ಹೀಗೆ ಈ ಎರಡೂ ಆಕಾಂಕ್ಷೆಗಳಿಂದ ಪ್ರಯಾಜಾದಿಗಳು ದರ್ಶಪೂರ್ಣದ ಅಂಗವಾಗಿ ಅನ್ವಯಿಸುವುವು.

**38) ಪ್ರಕರಣದ ಎರಡು ಪ್ರಕಾರಗಳು**

ಪ್ರಕರಣವು (1) ಮಹಾಪ್ರಕರಣ ಮತ್ತು (2) ಅವಾಂತರ ಪ್ರಕರಣ ಎಂದು ಎರಡು ವಿಧ.

**39) ಮಹಾಪ್ರಕರಣ**

ಮುಖ್ಯಭಾವನೆಗೆ ಸಂಬಂಧಿಸಿದ ಪ್ರಕರಣವು ಮಹಾಪ್ರಕರಣವು. ಇದರಿಂದ ಪ್ರಯಾಜಾದಿಗಳು ದರ್ಶಪೂರ್ಣಮಾಸದ ಅಂಗವಾಗುವುವು. ಮಹಾಪ್ರಕರಣವು ಪ್ರಕೃತಿಯಾಗದಲ್ಲಿ ಮಾತ್ರ ಇರುವುದು. ಪ್ರಕೃತಿಯಾಗದಲ್ಲಿಯೇ ಕಥಂಭಾವ. ಆಕಾಂಕ್ಷೆಗೆ ಅವಕಾಶವಿರುವುದು ವಿಕೃತಿಯಲ್ಲಿರುವುದಿಲ್ಲ. ವಿಕೃತಿಯಲ್ಲಿ 'ಪ್ರಕೃತಿವದ್ ವಿಕೃತಿಃ ಕರ್ತವ್ಯಾ' ಎಂದು ಹೇಳಿದ್ದರಿಂದ ಅತಿದೇಶದಿಂಧ 'ಕಥಂಭಾವ' ಆಕಾಂಕ್ಷೆಯು ಶಾಂತವಾಗುವುದು. ಅಪೂರ್ವವಾದ ಅಂಗಗಳಿಗೂ ಕೂಡ ಉಭಯಾಕಾಂಕ್ಷೆಯಿಂದ ವಿನಿಯೋಗವು ಸಂಭವಿಸುವುದಿಲ್ಲ. ಆದ್ದರಿಂದ ಅಪೂರ್ವಾಂಗಗಳು ಸ್ಥಾನದಿಂದಲೇ ವಿಕೃತಿಯಾಗಗಳಲ್ಲಿ ಇರುವುವು.

**40) ಅವಾಂತರ ಪ್ರಕರಣ**

ಅಂಗಭಾವನೆಗೆ ಸಂಬಂಧಿಸಿದ ಪ್ರಕರಣವು ಅವಾಂತರಪ್ರಕರಣ. ಈ ಅವಾಂತರ ಪ್ರಕರಣದಿಂದ ಅಬಿಕ್ರಮಣಾದಿಗಳು ಪ್ರಯಾಜಾದಿಗಳಿಗೆ ಅಂಗ-ವಾಗುವುದು. ಇದು ಸಂದಂಶದಿಂದ ತಿಳಿದುಬರುವುದು. ಅದನ್ನು ಗಮನಕ್ಕೆ ತೆಗೆದುಕೊಳ್ಳದಿದ್ದರೆ ಎಲ್ಲ ಅಂಗಗಳನ್ನು ಫಲಭಾವನೆಯ ಕಥಂಭಾವ ಆಕಾಂಕ್ಷೆ-ಯಿಂದ ತೆಗೆದುಕೊಳ್ಳುವ ಪ್ರಸಂಗವು ಬರುವುದರಿಂದ ಎಲ್ಲ ಅಂಗಗಳೂ ಪ್ರಧಾನಕ್ಕೆ ಅಂಗವಾಗಬೇಕಾಗುವುವು.

**41) ಸಂದಂಶದ ಲಕ್ಷಣ :** ಒಂದು ಅಂಗದ ಅನುವಾದ ಮಾಡಿ ವಿಧಿಸಲ್ಪಡುವ

ಎರಡು ಅಂಗಗಳ ಮಧ್ಯದಲ್ಲಿ ಬರುವುದೇ ಸಂದಂಶವು. ಉದಾಹರಣೆ : 'ಸಮಾನ ಯತೇ ಜುಹ್ವಾಂ ಉಪಹೃತಃ ತೇಜೋ ವೈ' (ತೈ.ಸಂ.2.6.1.2) ಎಂಬ ವಾಕ್ಯದಲ್ಲಿ ಪ್ರಯಾಜದ ಅನುವಾದ ಮಾಡಿ ಉಪಹೃತ್ಪಾತ್ರದಿಂದ ಜುಹೂ ಪಾತ್ರದಲ್ಲಿ ಪ್ರಯಾಜಕ್ಕಾಗಿ ಘೃತವನ್ನು ತರಬೇಕೆಂಬ ಅಂಗದ ವಿಧಾನ ಮಾಡಿ 'ಯಸ್ಯ ಏವಂ ವಿದುಃ ಪ್ರಯಾಜಾ ಯುಜ್ಯಂತೇ' ಪ್ರೈಭ್ಯೋ ಲೋಕೋಭ್ಯೋ ಭ್ರಾತೃವ್ಯಾನ್ ತುದತೇ ಅಧಿಕ್ರಾಮಂ ಜುಹೋತಿ ಅಭಿಜಿತ್ಯೈ (ತೈ.ಸಂ.2.6.1.4) ಎಂದು ಅಧಿಕ್ರಮಣವನ್ನು ಹೇಳಿದೆ. ಅನಂತರದಲ್ಲಿ 'ಯೋ ವೈ ಪ್ರಜಾನಾಂ ವಿಜನಂ ವೇದ' ಇತ್ಯಾದಿ ವಾಕ್ಯದಿಂದ ಇನ್ನೊಂದು ಅಂಗದ ವಿಧಾನವನ್ನು ಮಾಡಲಾಗಿದೆ. ಹೀಗೆ ಪ್ರಯಾಜದ ಎರಡು ಅಂಗಗಳ ಮಧ್ಯದಲ್ಲಿ ಪಠಿತವಾದ ಅಧಿಕ್ರಮಣವು ಅಂಗವಾಗಿದೆ. ಇದು ಸಂದಂಶವು. ಪ್ರಯಾಜಗಳಿಂದ ಅಪೂರ್ವ-ವನ್ನು ದೊರಕಿಸಿ ಯಾಗಕ್ಕೆ ಉಪಕಾರವನ್ನು ಮಾಡಬೇಕು. ಎಂದು ತಿಳಿದಾಗ ಈ ಅಂಗಗಳಿಂದ ಹೇಗೆ ಅಪೂರ್ವವನ್ನು ದೊರಕಿಸಬೇಕು ಎಂದು 'ಕಥಂ ಭಾವಾಕಾಂಕ್ಷೆಯು ಇರುವುದು. ಈ ಆಕಾಂಕ್ಷೆಯು ಸಂದಂಶದಿಂದ ಘಟಿತವಾದ ಅಧಿಕ್ರಮಣಾದಿ ಅಂಗಗಳಿಂದ ಶಾಂತವಾಗುವುದು. ಅಂಗಗಳ ಭಾವನೆಗೆ ಕಥಂ ಭಾವಾಕಾಂಕ್ಷೆಯು ಇಲ್ಲ ಎಂಬುದು ಸರಿಯಲ್ಲ. ಭಾವನಾ ಸಾಮಾನ್ಯಕ್ಕೆ ಕಥಂಭಾವಾ-ಕಾಂಕ್ಷೆಯು ಇರುವುದು.

42) ಪ್ರಕರಣವು ಕ್ರಿಯಾಗಳಿಗೆ ಮಾತ್ರ ಸಾಕ್ಷಾತ್ತಾಗಿ ಅಂಗತ್ವವನ್ನು ಹೇಳುವುದು.

ಪ್ರಕರಣವು ಕ್ರಿಯೆಗೆ ಮಾತ್ರ ಸಾಕ್ಷಾತ್ತಾಗಿ ವಿನಿಯೋಜಕವಾಗಿರುವುದು. ದ್ರವ್ಯ ಮತ್ತು ಗುಣಗಳಿಗೆ ಕ್ರಿಯಾದ್ವಾರಾ ವಿನಿಯೋಜಕವಾಗಿರುವುದು. ಉದಾಹರಣೆ 'ಯಜೇತ ಸ್ವರ್ಗಕಾಮಃ' ಎಂಬಲ್ಲಿ ಫಲಭಾವನೆಗೆ ಕಥಂಭಾವಾಕಾಂಕ್ಷೆ-ಯುಂಟಾದಾಗ ಅದರ ಸನ್ನಿಧಿಯಲ್ಲಿ ಹೇಳಿದ ಮತ್ತು ಫಲವನ್ನು ಹೇಳದ ಕ್ರಿಯೆ-ಗಳಿಗೆ ಉಪಕಾರ್ಯದ ಆಕಾಂಕ್ಷಾ ಇರುವುದರಿಂದ ಅವು ಇತಿ ಕರ್ತವ್ಯತಾ-ರೂಪವಾಗಿ ಅನ್ವಯವನ್ನು ಹೊಂದುವುವು. ಕಥಂ ಭಾವಾಕಾಂಕ್ಷೆಗೆ ಕ್ರಿಯಾಗಳ ಅನ್ವಯವಾಗುವುದು ಲೋಕದಲ್ಲಿ ಪ್ರಸಿದ್ಧವಾಗಿದೆ. ''ಕುಠಾರೇಣ ಛಿಂದ್ಯಾತ್' ಎಂಬಲ್ಲಿ ಕೈಯಿಂದ ಕುಠಾರವನ್ನು ಎತ್ತುವುದು ಮತ್ತು ಅದನ್ನು ಛೇದನ ಮಾಡಲು ಕೆಳಗೆ ಬಗ್ಗಿಸುವುದು ಇವುಗಳಿಗೆ ಕಥಂಭಾವಾಕಾಂಕ್ಷೆಯಿಂದ ಅನ್ವಯವಾಗುವುದು. ಕೈಯು ಇವುಗಳ ಮುಖಾಂತರವೇ ಅನ್ವಯವಾಗುವುದು.

**43) ಪ್ರಕರಣವು ಸ್ಥಾನ ಮತ್ತು ಸಮಾಖ್ಯೆಗಳಿಗಿಂತ ಬಲವತ್ತಾದುದು.**

ಪ್ರಕರಣವು ಸ್ಥಾನಾದಿಗಳಿಗಿಂತ ಬಲವತ್ತಾದುದು. 'ಅಕ್ಷೈಃ ದೀವ್ಯತಿ' 'ರಾಜನ್ಯಂ

ಜನಾತಿ', (ತೈ.ಸಂ. 1.8.160) ಎಂದು ಹೇಳಿದ ವಿದೇವನಾದಿ ಕರ್ಮಗಳು ಅಭಿಷೇಚನೆಯ ಸನ್ನಿಧಿಯಲ್ಲಿ ಹೇಳಲ್ಪಟ್ಟಿದ್ದರೂ ಸ್ಥಾನಪ್ರಮಾಣದಿಂದ ಅದಕ್ಕೆ ಅಂಗವಾಗುವುದಿಲ್ಲ. ಆದರೆ ಪ್ರಕರಣದಿಂದ ರಾಜಸೂಯದ ಅಂಗವಾಗುವುವು.

**44) ಸ್ಥಾನದ ನಿರೂಪಣೆಯು.**

ದೇಶ ಸಾಮಾನ್ಯವು ಎಂದರೆ ಹತ್ತಿರದ ದೇಶದಲ್ಲಿರುವುದು ಸ್ಥಾನ. ಇದು ಎರಡು ವಿಧ. (i) ಪಾಠಸಾದೇಶ್ಯ, ಎಂದರೆ ಪಾಠಕ್ರಮದಲ್ಲಿ ಹತ್ತಿರದಲ್ಲಿರುವುದು (ii) ಅನುಷ್ಠಾನಸಾದೇಶ್ಯ, ಎಂದರೆ ಅನುಷ್ಠಾನಕ್ರಮದಲ್ಲಿ ಹತ್ತಿರದಲ್ಲಿರುವುದು. ಸ್ಥಾನ ಮತ್ತು ಕ್ರಮ ಎಂಬ ಪದಗಳು ಒಂದೇ ಅರ್ಥದಲ್ಲಿರುವುವು.

ಪಾಠಸಾದೇಶ್ಯವು ಎರಡು ವಿಧ. (i) ಯಥಾಸಂಖ್ಯಪಾಠ ಸಂಖ್ಯೆಯ ಕ್ರಮದಲ್ಲಿ ಇರುವುದು (ii) ಸನ್ನಿಧಿಪಾಠ - ಸಮೀಪದಲ್ಲಿರುವುದು.

**45) ಯಥಾಸಂಖ್ಯಪಾಠದಿಂದ ವಿನಿಯೋಗ**

''ಐಂದ್ರಾಗ್ನಂ ಏಕಾದಶಕಪಾಲಂ ನಿರ್ವಪೇತ್' (ಮೈ.ಸಂ.2.1.1) 'ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್' (ಮೈ.ಸಂ.2.1.2) ಎಂದು ಕ್ರಮದಲ್ಲಿ ವಿಹಿತವಾದ ಇವುಗಳಿಗೆ ಇಂದ್ರಾಗ್ನೀ ರೋಚನಾ ದಿವಃ (ಮೈ.ಸಂ.4.11.1) ಇತ್ಯಾದಿಯಾಗಿ ವಿಧಿಸಿದ ಯಾಜ್ಯಾನುವಾಕ್ಯಾಮಂತ್ರಗಳು ಮೊದಲನೆಯದಕ್ಕೆ ಮೊದಲನೆಯದರ, ಎರಡನೆಯದಕ್ಕೆ ಎರಡನೆಯದರ ವಿನಿಯೋಗವಾಗುತ್ತದೆ. ಇದು ಯಥಾಸಂಖ್ಯ-ಪಾಠದಿಂದ ಆಗುತ್ತದೆ. ಮೊದಲು ಹೇಳಿದ ಮಂತ್ರಕ್ಕೆ ಇದು ಯಾವುದಕ್ಕೆ ಎಂಬ ಕೈಮರ್ಥ್ಯಾಕಾಂಕ್ಷೆಯುಂಟಾದಾಗ ಮೊದಲು ವಿಹಿತವಾದ ಕರ್ಮವೇ ಮೊದಲಿಗೆ ಒದಗಿಬರುತ್ತದೆ. ಏಕೆಂದರೆ, ಇವು ಹತ್ತಿರದ ದೇಶವುಳ್ಳವುಗಳಾಗಿವೆ. ಇದರಂತೆ ಎರಡನೆಯ ಮಂತ್ರವು ಎರಡನೆಯದಾಗಿ ವಿಹಿತವಾದ ಕರ್ಮಕ್ಕೆ ಅನ್ವಯಿಸುವುದು.

**46) ಸನ್ನಿಧಿಪಾಠದಿಂದ ವಿನಿಯೋಗವು.**

ಪ್ರಾಕೃತಾಂಗಗಳನ್ನು ಅನುವಾದ ಮಾಡದೆ ವಿಹಿತವಾದ ಮತ್ತು ಸಂದಂಶಗಳೂ ಆಗದ ವೈಕೃತ ಅಂಗಗಳು ವಿಕೃತಿಯಲ್ಲೇ ವಿನಿಯೋಗವಾಗುತ್ತವೆ. ಏಕೆಂದರೆ ಇವು ವಿಕೃತಿಯ ಸನ್ನಿಧಿಯಲ್ಲಿ ಪಠಿತವಾಗಿವೆ. ಉದಾಹರಣೆ– ಆಮನ ಹೋಮಗಳು. ಇವುಗಳಿಗೆ ಕೈಮರ್ಥ್ಯಾಕಾಂಕ್ಷೆಯು (ಎಂದರೆ, ಪ್ರಲಾಕಾಂಕ್ಷೆಯು) ಉಂಟಾದಾಗ ವಿಕೃತಿಯ ಅಪೂರ್ವವು ಭಾವ್ಯವಾಗಿ ಅನ್ವಯಿಸುತ್ತದೆ. ಏಕೆಂದರೆ, ಅದು ಸನ್ನಿಧಿ-

ಯಿಂದ ಒದಗಿ ಬರುತ್ತದೆ. ಇದಕ್ಕೆ ಸ್ವತಂತ್ರವಾದ ಫಲವನ್ನು ಕಲ್ಪಿಸಿದರೆ ವಿಕೃತಿಯ ಸನ್ನಿಧಿಯಲ್ಲಿ ಈ ಅಂಗಗಳನ್ನು ಹೇಳುವುದು ನಿರರ್ಥಕವಾಗುತ್ತದೆ.

**47) ಅನುಷ್ಠಾನ ಸಾದೇಶ್ಯದಿಂದ ವಿನಿಯೋಗವು.**

ಪಶುಧರ್ಮಗಳು ಅನುಷ್ಠಾನ ಸಾದೇಶದಿಂದ ಅಗ್ನೀಷೋಮೀಯಗಳ ಧರ್ಮಗಳಾಗಿವೆ. ಔಪಸಥ್ಯದ ದಿನದಲ್ಲಿ ಅಗ್ನಿಷೋಮೀಯ ಪಶುವಿನ ಅನುಷ್ಠಾನವನ್ನು ಮಾಡಲಾಗುತ್ತದೆ. ಅದೇದಿನದಲ್ಲಿ ಈ ಧರ್ಮಗಳು ಪಠಿತವಾಗಿವೆ. ಆದ್ದರಿಂದ ಈ ಧರ್ಮಗಳಿಗೆ ಕೈಮರ್ಥ್ಯಾಕಾಂಕ್ಷೆಯು (ಎಂದರೆ ಫಲಾಕಾಂಕ್ಷೆಯು) ಉಂಟಾದಾಗ ಅನುಷ್ಠೇಯವಾದ ಪಶ್ವಪೂರ್ವವೇ ಭಾವ್ಯವಾಗಿ ಅನ್ವಯಿಸುತ್ತದೆ. ಈ ಸ್ಥಾನ ಪ್ರಮಾಣವು ಸಮಾಖ್ಯಾಪ್ರಮಾಣಕ್ಕಿಂತ ಪ್ರಬಲವಾದುದು. ಆದ್ದರಿಂದಲೇ ಶುಂಧನಮಂತ್ರವು ಪಾಠಸಾದೇಶ್ಯದಿಂದ ಸಾಂನಾಯ್ಯಪಾತ್ರದ ಅಂಗವಾಗಿದೆ. ಆದರೆ ಪೌರೋಡಾಶಿಕಂ ಎಂಬ ಸಮಾಖ್ಯೆಯಿಂದ ಪುರೋಡಾಶಪಾತ್ರದ ಅಂಗವಾಗಿಲ್ಲ.

**48) ಸಮಾಖ್ಯಾ ನಿರೂಪಣ**

ಸಮಾಖ್ಯಾ ಎಂದರೆ ಯೌಗಿಕಶಬ್ದವು, ಎಂದರೆ, ಅವಯವಾರ್ಥದಿಂದ ಅರ್ಥವನ್ನು ಕೊಡುವ ಶಬ್ದವು. ಇದು ಎರಡು ವಿಧ ವೈದಿಕ ಮತ್ತು ಲೌಕಿಕ (1) ಹೋತೃವು ಚಮಸಭಕ್ಷಣಕ್ಕೆ ಅಂಗವಾಗಿರುವುದು 'ಹೋತೃ ಚಮಸಃ' ಎಂಬ ವೈದಿಕ ಸಮಾಖ್ಯೆಯಿಂದ ಆಗುತ್ತದೆ. (2) ಅಧ್ವರ್ಯುವು ಆಯಾ ಪದಾರ್ಥಗಳಿಗೆ ಅಂಗವಾಗಿರುವುದು. ಲೌಕಿಕವಾದ ಆಧ್ವರ್ಯವ ಎಂಬ ಸಮಾಖ್ಯೆಯಿಂದಾಗುತ್ತದೆ. ಈವರೆಗೆ ಶ್ರುತ್ಯಾದಿ ಆರು ಪ್ರಮಾಣಗಳನ್ನು ಸಂಕ್ಷಿಪ್ತವಾಗಿ ನಿರೂಪಿಸಲಾಯಿತು.

**49) ವಿನಿಯೋಗ ವಿಧಿಯಿಂದ ಬೋಧಿತವಾಗುವ ಅಂಗಗಳು :**

ಶ್ರುತ್ಯಾದಿ ಪ್ರಮಾಣಗಳ ಸಹಕಾರದಿಂದ 'ಸಮಿದಾದಿಭಿಃ ಉಪಕೃತ್ಯ ದರ್ಶಪೂರ್ಣಮಾಸಾಭ್ಯಾಂ ಯಜೇತ' ಎಂಬಲ್ಲಿ ಹೇಳಿದ ಅಂಗಗಳ ವಿನಿಯೋಗವಾಗುತ್ತದೆ.

ಈ ಅಂಗಗಳು ಸಿದ್ಧರೂಪವಾದುವು ಮತ್ತು ಕ್ರಿಯಾರೂಪವಾದುವು ಎಂದು ಎರಡು ವಿಧವಾಗಿವೆ. ಜಾತಿ, ದ್ರವ್ಯ, ಸಂಖ್ಯಾ ಆದಿಗಳು ಸಿದ್ಧರೂಪವಾದುವು. ಅವುಗಳು ದೃಷ್ಟಾರ್ಥವಾಗಿರುವುವು. ಕ್ರಿಯಾರೂಪವಾದ ಅಂಗಗಳು

ಗುಣಕರ್ಮಗಳು ಮತ್ತು ಪ್ರಧಾನಕರ್ಮಗಳು ಎಂದು ಎರಡು ವಿಧವಾಗಿರು-ವುವು. ಇವುಗಳಿಗೆ ಸನ್ನಿಪತ್ಯೋಪಕಾರಕ ಮತ್ತು ಆರಾದುಪಕಾರಕ ಎಂದು ಹೆಸರು.

**(50) ಸನ್ನಿಪತ್ಯೋಪಕಾರಕ ಅಂಗಗಳು.**

ಕರ್ಮಾಂಗಗಳಾದ ದ್ರವ್ಯಾದಿಗಳನ್ನುದ್ದೇಶಿಸಿ ವಿಧಾನ ಮಾಡುವ ಕರ್ಮಗಳು ಸನ್ನಿಪತ್ಯೋಪಕಾರಕಾಂಗಗಳು. ಉದಾಹರಣೆ : ಅವಘಾತ, ಪ್ರೋಕ್ಷಣ ಇತ್ಯಾದಿಗಳು. ಇವು ದೃಷ್ಟಾರ್ಥ, ಅದೃಷ್ಟಾರ್ಥ, ದೃಷ್ಟಾದೃಷ್ಟಾರ್ಥ ಎಂದು ಮೂರು ವಿಧವಾಗಿವೆ. ಅವಘಾತಾದಿಗಳು ದೃಷ್ಟಾರ್ಥ. ಪ್ರೋಕ್ಷಣಾದಿಗಳು ಅದೃಷ್ಟಾರ್ಥ. ಪಶುಪರೋಡಾಶಾದಿಗಳು ದೃಷ್ಟಾದೃಷ್ಟಾರ್ಥ. ಇವು ದ್ರವ್ಯದ ತ್ಯಾಗಾಂಶದಿಂದ ಅದೃಷ್ಟಾರ್ಥ. ದೇವತೋದ್ದೇಶದ ಅಂಶದಿಂದ ದೇವತಾಸ್ಮರಣೆಯನ್ನು ಮಾಡಿಸು-ವುದರಿಂದ ದೃಷ್ಟಾರ್ಥ. ಇದನ್ನೇ ಆಶ್ರಯಿಕರ್ಮ ಎನ್ನುತ್ತಾರೆ.

**51) ಆರಾದುಪಕಾರಕ ಅಂಗಗಳು** : ದ್ರವ್ಯಾದಿಗಳ ಉದ್ದೇಶವಿಲ್ಲದೆ ಕೇವಲ ವಿಧಾನ ಮಾಡುವ ಕರ್ಮಗಳು. ಆರಾದುಪಕಾರಕಾಂಗಗಳು. ಉದಾಹರಣೆ : ಪ್ರಯಾಜಾದಿಗಳು. ಇಲ್ಲಿ ಆದಿಪದದಿಂದ ಆಜ್ಯಭಾಗ ಮತ್ತು ಅನುಯಾಜಗಳು ಅಭಿಪ್ರೇತವಾಗಿವೆ.

**52) ಸನ್ನಿಪತ್ಯ ಮತ್ತು ಆರಾದುಪಕಾರಕಗಳ ವಿಶೇಷಾಂಶಗಳು :**

ಆರಾದುಪಕಾರಕವಾದ ಅಂಗಗಳು ಪರಮಾಪೂರ್ವದ ಉತ್ಪತ್ತಿಗೆ ಉಪಯುಕ್ತ-ವಾಗುತ್ತವೆ.ಸಂನಿಪತ್ಯೋಪಕಾರಕವಾದ ಅಂಗಗಳು ದ್ರವ್ಯಗಳು ಮತ್ತು ದೇವತೆಗಳ ಸಂಸ್ಕಾರ ದ್ವಾರದಿಂದ ಯಾಗಸ್ವರೂಪಕ್ಕೆ ಉಪಯೋಗವಾಗಿರುತ್ತವೆ. ಈವರೆಗೆ ವಿನಿಯೋಗವಿಧಿಯು ಸಂಕ್ಷಿಪ್ತವಾಗಿ ನಿರೂಪಿಸಲ್ಪಟ್ಟಿತು.

**53) ಪ್ರಯೋಗವಿಧಿ** : ಪ್ರಯೋಗದ ಪ್ರಾಶುಭಾವವನ್ನು ತಿಳಿಸುವ ವಿಧಿಯು ಪ್ರಯೋಗವಿಧಿಯು. ಪ್ರಾಶುಭಾವವೆಂದರೆ ಪ್ರಧಾನಕರ್ಮ ಮತ್ತು ಅಂಗ-ಕರ್ಮಗಳ ಪ್ರಯೋಗವನ್ನು ವಿಲಂಬವಿಲ್ಲದೆ ಮಾಡುವುದು. ಅಂಗವಾಕ್ಯ-ಗಳೊಡನೆ ಏಕವಾಕ್ಯತೆಯನ್ನು ಪಡೆದ ಪ್ರಧಾನವಿಧಿಯೇ ಪ್ರಯೋಗವಿಧಿ. ಅದು ಅಂಗಸಹಿತವಾದ ಪ್ರಧಾನದ ಅನುಷ್ಠಾನವನ್ನು ಮಾಡಿಸಲು ಪ್ರಯೋಗವು ವಿಲಂಬವಿಲ್ಲದೆ ಆಗುವುದರ ವಿಧಾನವನ್ನು ಮಾಡುವುದು. ವಿಲಂಬವಿಲ್ಲದೆ ಮಾಡುವುದು ಎನ್ನಲು ಪ್ರಮಾಣವಿಲ್ಲ ಎಂಬ ಆಕ್ಷೇಪವು ಸರಿಯಲ್ಲ. ವಿಲಂಬವನ್ನು ಮಾಡಿದರೆ ಅಂಗಪ್ರಧಾನವಿಧಿಗಳ ಏಕವಾಕ್ಯತೆಯಿಂದ ತಿಳಿದುಬರುವ ಅವುಗಳ ಸಾಹಿತ್ಯವು ಇಲ್ಲದಂತಾಗುವುದು. ವಿಲಂಬದಿಂದ ಮಾಡುವ ಪದಾರ್ಥಗಳಿಗೆ

'ಇದು ಇದರೊಡನೆ ಮಾಡಲ್ಪಟ್ಟಿತು' ಎಂಬ ಸಾಹಿತ್ಯದ ವ್ಯವಹಾರವಿರುವುದಿಲ್ಲ. ಅವಿಲಂಬವು ಒಂದು ನಿಯತವಾದ ಕ್ರಮವನ್ನು ಆಶ್ರಯಿಸಿದರೆ ಆಗುವುದು ಇಲ್ಲದಿದ್ದರೆ, ಇದರ ಅನಂತರ ಇದನ್ನು ಮಾಡಬೇಕು ಎಂಬ ಅಥವಾ ಅದರ ಅನಂತರದಲ್ಲಿ ಇದನ್ನು ಮಾಡಬೇಕೋ ಎಂದು ಪ್ರಯೋಗದ ವ್ಯವಸ್ಥೆಯೇ ತಪ್ಪಬಹುದು. ಆದ್ದರಿಂದ ಪ್ರಯೋಗವಿಧಿಯೇ ತನಗೆ ವಿಧೇಯವಾದ ಪ್ರಯೋಗದ ಅವಿಲಂಬದ ಸಿದ್ಧಿಗಾಗಿ ನಿಯತವಾದ ಕ್ರಮವನ್ನು ಅಲ್ಲಿ ಬಂದ ಪದಾರ್ಥಗಳ ವಿಶೇಷಣವಾಗಿ ವಿಧಾನ ಮಾಡುತ್ತದೆ. ಇದನ್ನು ತಿಳಿಸಲು ಅಂಗಗಳ ಕ್ರಮವನ್ನು ತಿಳಿಸುವ ವಿಧಿಯು ಪ್ರಯೋಗವಿಧಿಯು ಎಂದು ಪ್ರಯೋಗವಿಧಿಯ ಲಕ್ಷಣವನ್ನು ಹೇಳಲಾಗುತ್ತದೆ.

**54) ಕ್ರಮದ ಸ್ವರೂಪವು.**

ಕ್ರಮ ಎಂದರೆ ಪದಾರ್ಥಗಳ ಒಂದು ವಿಶಿಷ್ಟವಾದ ಯೋಜನೆಯು ಅಥವಾ ಪೌರ್ವಾಪರ್ಯರೂಪವಾದ ಯೋಜನೆಯು.

**55) ಕ್ರಮಕ್ಕೆ ಸಹಕಾರಿಯಾದ ಶ್ರುತ್ಯಾದಿ ಆರು ಪ್ರಮಾಣಗಳು.**

ಪಾಠ, ಶ್ರುತಿ, ಅರ್ಥ, ಸ್ಥಾನ, ಮುಖ್ಯ, ಪ್ರವೃತ್ತಿ.

**56) ಶ್ರುತಿಯ ಲಕ್ಷಣ**

ಕ್ರಮವನ್ನು ಹೇಳುವ ಶ್ರುತಿಯ ಎರಡು ವಿಧವಾಗಿದೆ. (1) ಕ್ರಮವನ್ನು ಮಾತ್ರ ಹೇಳುವುದು, (2) ಕ್ರಮವಿಶಿಷ್ಟ ಪದಾರ್ಥಗಳನ್ನು ಹೇಳುವುದು. 'ವೇದಂ ಕೃತ್ವಾ ವೇದಿಂ ಕರೋತಿ' (ಮಾನ.ಶ್ರೌ.ಸೂ.1.1.3.3) ಎಂಬಲ್ಲಿ ಕ್ರಮವನ್ನು ಮಾತ್ರ ಹೇಳಲಾಗಿದೆ. ವೇದ ಮತ್ತು ವೇದಿಗಳು ವಚನಾಂತರದಿಂದ ಪ್ರಾಪ್ತವಾಗಿವೆ. 'ವಷಟ್ ಕರ್ತುಃ ಪ್ರಥಮಃ ಭಕ್ಷಃ' (ಆ.ಶ್ರೌ.ಸೂ. 12.24.6) ಎಂಬಲ್ಲಿ ಕ್ರಮವಿಶಿಷ್ಟ ಪದಾರ್ಥವನ್ನು ಹೇಳಲಾಗಿದೆ. ಇಲ್ಲಿ ಭಕ್ಷದ ಅನುವಾದ ಮಾಡಿ ಕ್ರಮವನ್ನು ಮಾತ್ರ ವಿಧಾನ ಮಾಡುವುದು ಶಕ್ಯವಿಲ್ಲ. ಹಾಗೆ ಹೇಳಿದರೆ ಪ್ರಾಥಮ್ಯದಿಂದ ಕೂಡಿದ ಭಕ್ಷ್ಯರೂಪಪದಾರ್ಥ ಎಂಬ ವಿಶಿಷ್ಟೋಪಸ್ಥಿತಿಯ ಭಂಗ ಬರುತ್ತದೆ.

**57) ಶ್ರುತಿಯು ಕ್ರಮಬೋಧಕವಾದ ಇತರ ಪ್ರಮಾಣಗಳಿಗಿಂತ ಪ್ರಬಲವಾದುದು.**

ಶ್ರುತಿಯು ಇತರ ಪ್ರಮಾಣಗಳಿಗಿಂತ ಪ್ರಬಲವಾದುದು. ಇತರ ಪ್ರಮಾಣ-ಗಳು ವಚನವನ್ನು ಕಲ್ಪಿಸಿ ಕ್ರಮವನ್ನು ಹೇಳುವ ಪ್ರಮಾಣಗಳು. ಆದರೆ ಶ್ರುತಿಯು

ಎಂದರೆ ವಚನವು ಸಾಕ್ಷಾತ್ತಾಗಿ ಕ್ರಮವನ್ನು ತಿಳಿಸುವುದು. ಉದಾಹರಣೆಗೆ ಅಶ್ವಿನಗ್ರಹವು ಪಾಠಕ್ರಮದಿಂದ ಮೂರನೆಯ ಸ್ಥಾನದಲ್ಲಿ ಇರಬೇಕು ಎಂದು ಪ್ರಸಕ್ತವಾದಾಗ 'ಆಶ್ವಿನೋ ದಶಮೋ ಗೃಹ್ಯತೇ' (ಮೈ.ಸಂ.4.6.1) ಎಂಬ ವಚನದಿಂದ ದಶಮಸ್ಥಾನದಲ್ಲಿ ಅದರ ಗ್ರಹಣವಾಗುವುದು.

**ಅರ್ಥಕ್ರಮ–** 58) ಪ್ರಯೋಜನವನ್ನು ಗಮನದಲ್ಲಿಟ್ಟುಕೊಂಡು ಕ್ರಮದ ನಿರ್ಣಯವನ್ನು ಮಾಡುವುದು ಅರ್ಥಕ್ರಮವು. ಅಗ್ನಿಹೋತ್ರಂ ಜುಹೋತಿ,' 'ಯವಾಗುಂ ಪಂಚತಿ' (ತೈ.ಬ್ರಾ.2.1.5.6) ಎಂದು ಹೇಳಿದ ಯವಾಗು ಪಾಕವು ಹೋಮಕ್ಕಾಗಿ ಇರುವುದು. ಆದ್ದರಿಂದ ಇದರ ಅನುಷ್ಠಾನವನ್ನು ಮೊದಲು ಮಾಡಬೇಕು. ಅರ್ಥಕ್ರಮವು ಪಾಠಕ್ರಮಕ್ಕಿಂತ ಪ್ರಬಲವಾದುದು. ಇಲ್ಲಿ ಪಾಠಕ್ರಮದಂತೆ ಅನುಷ್ಠಾನ ಮಾಡಿದರೆ ಯಾವಾಗುಪಾಕಕ್ಕೆ ಪ್ರಯೋಜನಕ್ಕೆ ಬಾಧವು ಬರುವುದು. ಮತ್ತು ಅದು ಅದೃಷ್ಟಾರ್ಥ ಎನ್ನಬೇಕಾಗುವುದು. ಹೋಮವಾದಮೇಲೆ ಮಾಡುವ ಯವಾಗು ಪಾಕಕ್ಕೆ ದೃಷ್ಟವಾದ ಪ್ರಯೋಜನವು ಯಾವುದೂ ಇಲ್ಲ.

**ಪಾಠಕ್ರಮ–** 59) ಪದಾರ್ಥಗಳನ್ನು ತಿಳಿಸುವ ವಾಕ್ಯಗಳ ಕ್ರಮವು ಪಾಠಕ್ರಮವು. ಇದರಿಂದ ಪದಾರ್ಥಗಳ ಕ್ರಮವು ತಿಳಿದುಬರುತ್ತದೆ. ಯಾವಕ್ರಮ ದಿಂದ ವಾಕ್ಯಗಳ ಪಾಠಬರುವುದೋ ಅದೇ ಕ್ರಮದಿಂದ ಅವುಗಳ ಅಧ್ಯಯನ ಮಾಡಿದಾಗ ಅರ್ಥದ ಪ್ರತೀತಿಯಾಗುವುದು. ಅರ್ಥದ ಪ್ರತೀತಿಯಾದ ಕ್ರಮ-ದಿಂದ ಪದಾರ್ಥಗಳ ಅನುಷ್ಠಾನವನ್ನು ಮಾಡಬೇಕು. ಪಾಠವು ಮಂತ್ರಪಾಠ ಹಾಗೂ ಬ್ರಾಹ್ಮಣಪಾಠ ಎಂದು ಎರಡು ವಿಧ. ಅಗ್ನೀಷೋಮೀಯ ಯಾಗಗಳ ಯಾಜ್ಯಾನುವಾಕ್ಯಗಳ ಪಾಠದಂತೆ ಕ್ರಮವನ್ನು ಆಶ್ರಯಿಸುವುದು ಮಂತ್ರಪಾಠ.

**60) ಮಂತ್ರಪಾಠವು ಬ್ರಾಹ್ಮಣಪಾಠಕ್ಕಿಂತ ಪ್ರಬಲವಾದುದು.**

ಅನುಷ್ಠಾನವನ್ನು ಮಾಡುವಾಗ ಬ್ರಾಹ್ಮಣವಾಕ್ಯಕ್ಕಿಂತ ಮಂತ್ರಪಾಠವು ಅಂತರಂಗ ವಾದುದರಿಂದ ಮಂತ್ರಪಾಠವು ಬ್ರಾಹ್ಮಣಪಾಠಕ್ಕಿಂತ ಪ್ರಬಲವಾದುದು. ಬ್ರಾಹ್ಮಣವಾಕ್ಯವು ಪ್ರಯೋಗದ ಹೊರಗೆ ಇದನ್ನು ಈ ರೀತಿಯಾಗಿ ಮಾಡಬೇಕು' ಎಂದು ತಿಳಿಸಿ ಕೃತಾರ್ಥವಾಗುವುದು. ಮಂತ್ರಗಳು ಪ್ರಯೋಗಕಾಲದಲ್ಲಿ ಹೇಳ-ಲ್ಪಟ್ಟು ಪದಾರ್ಥಗಳ ಸ್ಮರಣೆಯನ್ನು ಮಾಡುವುವು. ಅನುಷ್ಠಾನಕ್ರಮವು ಸ್ಮರಣದ ಕ್ರಮವನ್ನು ಅನುಸರಿಸಿರುತ್ತದೆ. ಸ್ಮರಣದ ಕ್ರಮವು ಮಂತ್ರಕ್ರಮದಂತೆ ಇರುತ್ತದೆ. ಆದ್ದರಿಂದ ಮಂತ್ರಪಾಠವು ಅಂತರಂಗವಾದುದು.

61) ಬ್ರಾಹ್ಮಣ ಪಾಠದ ಕ್ರಮದಂತೆ ಕ್ರಮವು.

62) ಸ್ಥಾನದ ಲಕ್ಷಣವು.

ಸ್ಥಾನವು ಎಂದರೆ ಉಪಸ್ಥಿತಿಯು. ಯಾವ ಪ್ರದೇಶದಲ್ಲಿ ಯಾವುದರ ಅನುಷ್ಠಾನವಾಗುತ್ತದೆಯೋ ಅದಕ್ಕೆ ಮೊದಲಿನ ಪದಾರ್ಥದ ಅನುಷ್ಠಾನವಾದಮೇಲೆ ಮೊದಲು ಉಪಸ್ಥಿತವಾದುದರ ಅನುಷ್ಠಾನವನ್ನು ಮೊದಲು ಮಾಡಬೇಕು. ಉದಾಹರಣೆ– ಸಾದ್ಯಸ್ಕಯಾಗದಲ್ಲಿ ಅಗ್ನೀಷೋಮೀಯ, ಸವನೀಯ ಮತ್ತು ಅನುಬಂಧ್ಯ, ಈ ಮೂರರ ಅನುಷ್ಠಾನವನ್ನು ಜೊತೆಜೊತೆಯಾಗಿ ಸವನೀಯ ದೇಶದಲ್ಲಿ ಮಾಡಬೇಕು. ಮೊದಲು ಸವನೀಯ ಪಶುವಿನ ಅನುಷ್ಠಾನ. ನಂತರ ಇನ್ನುಳಿದ ಎರಡರ ಅನುಷ್ಠಾನ. ಏಕೆಂದರೆ ಆಶ್ವಿನಗ್ರಹಣದ ಅಂತರದಲ್ಲಿ ಸವನೀಯವು ಮೊದಲು ಉಪಸ್ಥಿತವಾಗುವುದು.

63) ಸಾದ್ಯಸ್ಕಯಾಗ

ಜ್ಯೋತಿಷ್ಟೋಮದಲ್ಲಿ ಅಗ್ನೀಷೋಮೀಯ, ಸಮನೀಯ ಮತ್ತು ಅನುಬಂಧ್ಯ ಎಂಬ ಮೂರು ಪಶುಯಾಗಗಳಿರುವುವು. ಅವು ಭಿನ್ನವಾದ ಕಾಲಗಳಲ್ಲಿರುವುವು. ಅಗ್ನೀಷೋಮೀಯವು ಔಪಸತ್ಥ್ಯದ ದಿನದಲ್ಲಿ ಸವನೀಯವು ಸುತ್ಯಾಕಾಲದಲ್ಲಿ ಅನುಬಂಧ್ಯ ಕೊನೆಯಲ್ಲಿ. ಸಾದ್ಯಸ್ಕವು ಸೋಮಯಾಗದ ವಿಶೇಷವು. ಅದು ಅವ್ಯಕ್ತವಾದ್ದರಿಂದ ಜ್ಯೋತಿಷ್ಟೋಮದ ವಿಕಾರವು. ಆದ್ದರಿಂದ ಈ ಮೂರೂ ಪಶುಯಾಗಗಳು ಸಾದ್ಯಸ್ಕದಲ್ಲಿ ಚೋದಕದಿಂದ ಬಂದಿರುವುವು. ಸಹಪಶೂನ್ ಆಲಭೇತ (ಶ್ರೌ.ಸೂ.22.3.28) ಎಂದು ಈ ಮೂರರ ಸಾಹಿತ್ಯವನ್ನು ಹೇಳಲಾಗಿದೆ. ಈ ಸಾಹಿತ್ಯವನ್ನು ಸವನೀಯ ದೇಶದಲ್ಲಿ ಮಾಡಬೇಕು. ಏಕೆಂದರೆ ಅದು ಪ್ರಧಾನಕ್ಕೆ ಹತ್ತಿರದಲ್ಲಿದೆ. ಸ್ಥಾನದ ಅತಿಕ್ರಮವು ಮೂರರಲ್ಲಿಯೂ ಸಮನಾಗಿದೆ.

64) ಸ್ಥಾನದ ಅತಿಕ್ರಮದ ಸಾಮ್ಯವು.

ಸವನೀಯ ದೇಶದಲ್ಲಿ ಅನುಷ್ಠಾನ ಮಾಡಿದರೆ ಅಗ್ನೀಷೋಮೀಯ ಮತ್ತು ಅನುಬಂಧ್ಯಗಳು ತಮ್ಮ ತಮ್ಮ ಸ್ಥಾನದ ಅತಿಕ್ರಮ ಮಾಡಿದಂತೆ ಆಗುವುದು. ಅಗ್ನೀಷೋಮೀಯ ದೇಶದಲ್ಲಿ ಅನುಷ್ಠಾನ ಮಾಡಿದರೆ ಸಮನೀಯಕ್ಕೆ ತನ್ನ ಸ್ಥಾನದ ಅತಿಕ್ರಮವಾಗುವುದು. ಅಗ್ನೀಷೋಮೀಯಕ್ಕೆ ಸವನೀಯ ಸ್ಥಾನದ ಅತಿಕ್ರಮವು. ಅನುಬಂಧ್ಯಕ್ಕೆ ಅದರ ಸ್ಥಾನದಲ್ಲಿ ಅತಿಕ್ರಮವೂ, ಸವನೀಯ ಸ್ಥಾನದ ಅತಿಕ್ರಮವೂ ಆಗುವುದು. ಇದೇ ರೀತಿಯಾಗಿ ಅನುಬಂಧ್ಯ ದೇಶದಲ್ಲಿ ಅಗ್ನೀಷೋಮೀಯದ ಸ್ಥಾನದ ಅತಿಕ್ರಮವನ್ನು ತಿಳಿಯಬೇಕು.

**65) ಸವನೀಯದ ಅನುಷ್ಠಾನವನ್ನು ಮೊದಲು ಮಾಡಬೇಕು.**

ಸವನೀಯ ದೇಶದಲ್ಲಿ ಮೂರರ ಅನುಷ್ಠಾನವನ್ನೂ ಮಾಡುವಾಗ ಸವನೀಯದ ಅನುಷ್ಠಾನವನ್ನು ಮೊದಲು ಮಾಡಬೇಕು. ಆಶ್ವಿನಗ್ರಹಣದ ಅನಂತರದಲ್ಲಿ ಸವನೀಯ ದೇಶವು ಬರುವುದು. ಪ್ರಕೃತಿಯಲ್ಲಿ ''ಆಶ್ವಿನಂ ಗೃಹಂ ಗೃಹೀತ್ವಾ, ತ್ರಿವೃತಾ ರೂಪಂ ಪರಿವೀಯ ಆಗ್ನೇಯಂ ಸವನೀಯಂ ಪಶುಂ ಉಪಾಕರೋತಿ'' (ಶತ.ಭ್ರಾ. 4.2.5.12) ಎಂದು ಆಶ್ವಿನಗ್ರಹಣದ ಅನಂತರದಲ್ಲಿ ಸವನೀಯವು ವಿಹಿತವಾಗಿದೆ. ಆದ್ದರಿಂದ ಸಾದ್ಯಸ್ಕದಲ್ಲಿಯೂ ಕೂಡ ಆಶ್ವಿನ-ಗ್ರಹಣವನ್ನು ಮಾಡಿದ ಮೇಲೆ ಸವನೀಯವೇ ಉಪಸ್ಥಿತವಾಗುವುದು. ಆದ್ದರಿಂದ ಸ್ಥಾನಪ್ರಮಾಣದಿಂದ ಅದರ ಅನುಷ್ಠಾನವನ್ನು ಮೊದಲು ಮಾಡುವುದು ಯುಕ್ತವೇ ಆಗಿದೆ. ಇನ್ನಿತರ ಎರಡರ ಅನುಷ್ಠಾನವನ್ನು ಅನಂತರದಲ್ಲಿ ಮಾಡಬೇಕು.

**66) ಮುಖ್ಯಕ್ರಮದ ಲಕ್ಷಣವು.**

ಪ್ರಧಾನಕ್ರಮಕ್ಕೆ ಅನುಗುಣವಾಗಿ ಅಂಗಗಳ ಕ್ರಮವನ್ನು ಆಶ್ರಯಿಸುವುದು ಮುಖ್ಯಕ್ರಮವು. ಯಾವ ಕ್ರಮದಿಂದ ಪ್ರಧಾನಗಳ ಅನುಷ್ಠಾನವನ್ನು ಮಾಡ-ಲಾಗುತ್ತದೆಯೋ ಅದೇ ಕ್ರಮದಲ್ಲಿ ಅಂಗಗಳ ಅನುಷ್ಠಾನವನ್ನು ಮಾಡಬೇಕು. ಹೀಗೆ ಮಾಡಿದಾಗ ಎಲ್ಲ ಅಂಗಗಳಿಗೂ ಪ್ರದಾನದ ಜೊತೆಗೆ ಸಮನಾದ ವ್ಯವಧಾನವಾಗುವುದು. ಈ ಕ್ರಮವನ್ನು ಬಿಟ್ಟು ಬೇರೆ ಕ್ರಮದಿಂದ ಅನುಷ್ಠಾನ ಮಾಡಿದರೆ ಕೆಲವು ಅಂಗಗಳಿಗೆ ತಮ್ಮ ಪ್ರಧಾನಗಳ ಜೊತೆಗೆ ಬಹಳ ಅವ್ಯವಧಾನ-ವಾಗುವುದು. ಇನ್ನು ಕೆಲವಕ್ಕೆ ಬಹಳ ವ್ಯವಧಾನವಾಗುವುದು. ಇದು ಸರಿಯಲ್ಲ. ಹೇಗೆ ಮಾಡಿದರೆ ಪ್ರಯೋಗವಿಧಿಯಿಂದ ತಿಳಿದುಬರುವ ಸಾಹಿತ್ಯಕ್ಕೆ ಬಾಧವು ಬರುತ್ತದೆ. ಆದ್ದರಿಂದ ಪ್ರಧಾನಕ್ರಮವು ಅಂಗಗಳ ಕ್ರಮಕ್ಕೆ ಕಾರಣ. ಹೀಗಿರು-ವುದರಿಂದ ಪ್ರಯಾಜಶೇಷದಿಂದ ಮೊದಲು ಆಗ್ನೇಯ ಹವಿಸ್ಸಿಗೆ ಅಭಿಘಾರಣ-ವನ್ನು ಮಾಡಬೇಕು. ಆಗ್ನೇಯ ಮತ್ತು ಐಂದ್ರಯಾಗಗಳಿಗೆ ಪೌರ್ವಾಪರ್ಯವಿದೆ. ಇದರಿಂದ ಈ ಎರಡೂ ಅಭಿಘಾರಣಗಳಿಗೂ ಸಮನಾದ ವ್ಯವಧಾನವಾಗುವುದು. ಈ ಕ್ರಮವನ್ನು ಬಿಟ್ಟು ಬೇರೆ ಕ್ರಮದಿಂದ ಮಾಡಿದರೆ ಯಾಗಗಳಿಗೆ ಆಗ್ನೇಯ-ಹವಿಸ್ಸಿಗೆ ಅಭಿಘಾರಣ ಮತ್ತು ಆಗ್ನೇಯ ಯಾಗಗಳಿಗೆ ಬಹಳ ಅವ್ಯವಧಾನ-ವಿರುವುದು. ಐಂದ್ರ ದಧಿ ಅಭಿಘಾರಣ ಮತ್ತು ಐಂದ್ರಯಾಗಗಳಿಗೆ ಎರಡರ ಅಂತರವಾಗಿ ವ್ಯವಧಾನ ಬರುವುದು ಇದು ಯುಕ್ತವಲ್ಲ.

**67) ಮುಖ್ಯಕ್ರಮವು ಪಾಠಕ್ರಮಕ್ಕಿಂತ ದುರ್ಬಲವಾದುದು.**

ಮುಖ್ಯಕ್ರಮವು ಪಾಠಕ್ರಮಕ್ಕಿಂತ ದುರ್ಬಲವಾದುದು ಏಕೆಂದರೆ ಮುಖ್ಯ-ಕ್ರಮವು ಪ್ರಮಾಣಾಂತರದ ಅಪೇಕ್ಷೆಯಿರುವ ಪ್ರಧಾನಕ್ರಮದ ಪ್ರತಿಪತ್ತಿಯ ಅಪೇಕ್ಷೆಯುಳ್ಳದ್ದಾಗಿರುವುದರಿಂದ ವಿಲಂಬಿತವಾದ ಪ್ರತಿಪತ್ತಿಯುಳ್ಳದ್ದಾಗಿರು-ವುದು. ಪಾಠಕ್ರಮವು ನಿರಪೇಕ್ಷಿತವಾದ ಸ್ವಾಧ್ಯಾಯ ಪಾಠದ ಕ್ರಮವನ್ನು ಮಾತ್ರ ಅಪೇಕ್ಷಿಸುವುದರಿಂದ ಪ್ರಬಲವಾಗಿರುವುದು.

**68)** ಮುಖ್ಯಕ್ರಮವು ಪ್ರವೃತ್ತಿಕ್ರಮಕ್ಕಿಂತ ಪ್ರಬಲವಾಗಿದೆ. ಏಕೆಂದರೆ ಪ್ರವೃತ್ತಿ-ಕ್ರಮದಲ್ಲಿ ಅನೇಕ ಅಂಗಗಳು ಪ್ರಧಾನದಿಂದ ದೂರವಾಗಿರುತ್ತದೆ. ಮುಖ್ಯಕ್ರಮ-ದಲ್ಲಿ ಸಮೀಪದಲ್ಲಿರುತ್ತವೆ.

**69) ಪ್ರವೃತ್ತಿಕ್ರಮದ ಲಕ್ಷಣ**

ಒಟ್ಟಿಗೇ ಪ್ರಯೋಗವಾಗುವ ಪ್ರಧಾನಗಳಿಗೆ ಮಾಡಲಾಗುವ ಅಂಗಗಳ ಅನುಷ್ಠಾನವನ್ನು ಆವೃತ್ತಿಯಿಂದ ಅನುಷ್ಠಾನ ಮಾಡುವಾಗ ಮೊದಲು ಅನುಷ್ಠಾನ ಮಾಡಿದ ಪದಾರ್ಥದ ಕ್ರಮದಂತೆ ಮುಂದಿನ ಪದಾರ್ಥಗಳ ಕ್ರಮವನ್ನು ಅನುಸರಿಸುವುದು ಪ್ರವೃತ್ತಿಕ್ರಮವು. ಉದಾಹರಣೆ ಪ್ರಾಜಾಪತ್ಯದ ಪಶುವಿನ ಅಂಗಗಳಿಗೆ 'ವೈಶ್ವದೇವೀಂ ಕೃತ್ವಾ ಪ್ರಾಜಾಪತ್ಯೇ ಚರಂತಿ' (ತೈ.ಬ್ರಾ.1.3.4.3) ಎಂಬ ವಾಕ್ಯದಲ್ಲಿ ದ್ವಿತೀಯಾ ವಿಭಕ್ತಿಯಿರುವುದರಿಂದ ಇತಿಕರ್ತವ್ಯತಾ ಸಹಿತವಾಗಿ ಏಕಕಾಲದಲ್ಲಿ ಮಾಡಬೇಕೆಂದು ಹೇಳಲಾಗಿದೆ. (ಜೈ.ಸೂ.11.2.24) ಆದ್ದರಿಂದ ಅವುಗಳಿಗೆ ಮತ್ತು ಅವುಗಳ ಅಂಗವಾದ ಉಪಾಕರಣ, ನಿಯೋಜನಾದಿಗಳಿಗೆ ಸಾಹಿತ್ಯವಿರಬೇಕು. ಇದು ಪ್ರಾಜಾಪತ್ಯಪಶುಗಳಿಗೆ ಒಟ್ಟಿಗೇ ಅನುಷ್ಠಾನ ಮಾಡಿದರೆ ಮಾಡುವುದು. ಆದರೆ ಅವುಗಳ ಅಂಗಗಳ ಉಪಾಕರಣಾದಿಗಳನ್ನು ಒಟ್ಟಿಗೇ ಅನುಷ್ಠಾನ ಮಾಡುವುದು ಸಾಧ್ಯವಿಲ್ಲ. ಆದ್ದರಿಂದ ಅವುಗಳ ಸಾಹಿತ್ಯವನ್ನು ಮಧ್ಯದಲ್ಲಿ ವ್ಯವಧಾನವಿಲ್ಲದೆ ಅನುಷ್ಠಾನ ಮಾಡಿ ದೊರಕಿಸಬೇಕು. ಒಂದಕ್ಕೆ ಉಪಾಕರಣವನ್ನು ಮಾಡಿ ಇನ್ನೊಂದಕ್ಕೆ ಉಪಾಕರಣವನ್ನು ಮಾಡಬೇಕು. ಇದರಂತೆ ನಿಯೋಜನಾದಿಗಳನ್ನು ಒಂದಕ್ಕೆ ಮಾಡಿ ಇನ್ನೊಂದಕ್ಕೆ ಮಾಡಬೇಕು. ಪ್ರಜಾಪತ್ಯ-ದಲ್ಲಿ ಯಾವುದಾದರೊಂದು ಪಶುವಿನಿಂದ ಉಪಾಕರಣಾದಿಗಳನ್ನು ಮಾಡುವು-ದನ್ನು ಆರಂಭಿಸಿ ಒಂದನ್ನ ಎಲ್ಲ ಪಶುಗಳಿಗೂ ಮಾಡಿ ಮುಂದಿನ ಪದಾರ್ಥಗಳಿಗೆ ಅಂಗಳ ಅನುಷ್ಠಾನವನ್ನು ಅದೇ ಕ್ರಮದಿಂದ ಮಾಡಬೇಕು. ಇದಕ್ಕೆ ಪ್ರವೃತ್ತಿಕ್ರಮ ಎಂದು ಹೆಸರು. ಇದು ಶ್ರುತ್ಯಾದಿ ಪ್ರಮಾಣಗಳಿಗಿಂತ ಪ್ರಬಲವಾದುದು. ಈವರೆಗೆ

ಆರು ವಿಧವಾದ ಕ್ರಮ ಪ್ರಮಾಣಗಳನ್ನು ನಿರೂಪಿಸಿ ಪ್ರಯೋಗವಿಧಿಯ ನಿರೂಪಣೆ ಮಾಡಲಾಯಿತು.

### 70) ಅಧಿಕಾರ ವಿಧಿಯ ಲಕ್ಷಣವು.

ಕರ್ಮದಿಂದುಂಟಾಗುವ ಫಲದ ಸ್ವಾಮಿತ್ವವನ್ನು ಹೇಳುವ ವಿಧಿಯು ಅಧಿಕಾರ ವಿಧಿಯು. ಕರ್ಮಜನ್ಯಫಲದ ಸ್ವಾಮಿತ್ವವೆಂದರೆ ಫಲಭೋಕ್ತೃತ್ವವು. ಅಧಿಕಾರ-ವಿಧಿಯು 'ಯಜೇತ ಸ್ವರ್ಗಕಾಮಃ' ಇತ್ಯಾದಿ ರೂಪವಾಗಿರುವುದು. ಸ್ವರ್ಗ-ವನ್ನುದ್ದೇಶಿಸಿ ಯಾಗದ ವಿಧಾನ ಮಾಡಿದ್ದರಿಂದ ಸ್ವರ್ಗದ ಕಾಮನೆಯುಳ್ಳವನು ಯಾಗದಿಂದುಂಟಾಗುವ ಫಲಭೋಕ್ತೃವಾಗಿದ್ದಾನೆ ಎಂದು ತಿಳಿದುಬರುವುದು.

### 71) ಅಧಿಕಾರದ ಸ್ವರೂಪವು

ಅಧಿಕಾರವುಳ್ಳವನಿಗೆ ಫಲದ ಸ್ವಾಮಿತ್ವವು ಇರುವುದು. ಈ ವಾಕ್ಯದಲ್ಲಿ ಪುರುಷನಿಗೆ ವಿಶೇಷಣವಾಗಿ ಹೇಳಿದ್ದೇ ಅಧಿಕಾರವು. ಕಾಮ್ಯಕರ್ಮಗಳಲ್ಲಿ ಫಲದ ಕಾಮನೆಯಿರುವುದು. ನೈಮಿತ್ತಿಕಕರ್ಮಗಳ ನಿಮಿತ್ತದ ನಿಶ್ಚಯವೂ, ನಿತ್ಯಕರ್ಮ-ಗಳಾದ ಸಂಧ್ಯಾವಂದನಾದಿಗಳಲ್ಲಿ ಶುಚಿಯಾದ ಮತ್ತು ವಿಹಿತವಾದ ಕಾಲದಲ್ಲಿ ಇರುವುದು. 'ರಾಜಾ ರಾಜಸೂಯೇನ ಸ್ವಾರಾಜ್ಯಕಾಮೋ ಯಜೇತ' ಎಂಬ ವಾಕ್ಯವು ಸ್ವರಾಜ್ಯವನ್ನು ಉದ್ದೇಶಿಸಿ ರಾಜಸೂಯದ ವಿಧಾನ ಮಾಡಿದ್ದರೂ ಸ್ವಾರಾಜ್ಯಮಾತ್ರದ ಕಾಮನೆಯಿರುವ ಫಲಭೋಕ್ತೃತ್ವವಿಲ್ಲ. ಆದರೆ ರಾಜನಾಗಿದ್ದು ಸ್ವಾರಾಜ್ಯಕಾಮನೆಯನ್ನು ಮಾಡುವವನಿಗೆ ಫಲಭೋಕ್ತೃತ್ವದ ಅಧಿಕಾರವಿರುವುದು. ಏಕೆಂದರೆ ಈ ವಿಧಿವಾಕ್ಯದಲ್ಲಿ ರಾಜತ್ವವೂ ಕೂಡ ಅಧಿಕಾರ ವಿಶೇಷಣ-ವಾಗಿರುವುದು.

### 72) ಪುರುಷ ವಿಶೇಷಣ (ಅಶ್ರುತ)

ಕೆಲವು ಕಡೆ ಪುರುಷನಿಗೆ ವಿಶೇಷಣವಾಗಿ ಹೇಳದಿದ್ದರೂ ಅಧಿಕಾರಿಗೆ ವಿಶೇಷಣವಾಗಿರುವುದು. ಉದಾಹರಣೆಗೆ– ಅಧ್ಯಯನವಿಧಿ ಸಿದ್ಧವಾದ ವಿದ್ಯೆಯು ಕ್ರತುವಿನ ವಿಧಿಗಳಿಗೆ ಅರ್ಥಜ್ಞಾನದ ಅಪೇಕ್ಷೆಯಿದೆ. ಆದ್ದರಿಂದ ಅಧ್ಯಯನ-ವಿಧಿಯಿಂದ ಸಿದ್ಧವಾದ ಅರ್ಥಜ್ಞಾನವಿರುವವನಿಗೆ ವಿಧಿಯು ಅನ್ವಯಿಸುವುದು. ಇದರಂತೆಯೇ ಅಗ್ನಿಯಿಂದ ಸಾಧ್ಯವಾಗುವ ಕರ್ಮಗಳಿಗೆ ಆಧಾನಸಿದ್ಧವಾದ ಅಗ್ನಿಯಿರುವವನಗೇ ಅನ್ವಯಿಸುವುದು. ಅಗ್ನಿಸಾಧ್ಯವಾದ ಕರ್ಮಗಳಿಗೆ ಅಗ್ನಿಯ ಅಪೇಕ್ಷೆಯಿರುವುದರಿಂದ ಇಂಥ ಕರ್ಮದ ವಿಧಿಗಳು ಆಧಾನಸಿದ್ಧವಾದ ಅಗ್ನಿಯಿರುವವನಿಗೆ ಅನ್ವಯಿಸುವುವು. ಇದರಂತೆಯೇ ಸಮರ್ಥನಾದವರಿಗೆ

ವಿಧಿಯು ಅನ್ವಯಿಸುವುದು. ಅರ್ಥವನ್ನು ಹೇಳುವ ಆಖ್ಯಾತಗಳಿಗೆ ಶಕ್ತಿಯು ಸಹಕಾರಿಣಿ. (ಶಾ.ಭಾ.1.4)

ಈವರೆಗೆ ವಿಧಿಯು ನಿರೂಪಿತವಾಯಿತು.

## IV. ಮಂತ್ರಪರಿಚ್ಛೇದವು

### 73) ಮಂತ್ರಮೀಮಾಂಸೆ

ಯಾಗದ ಪ್ರಯೋಗವನ್ನು ಮಾಡುವಾಗ ಅದರಲ್ಲಿಯ ಪದಾರ್ಥಗಳ ಸ್ಮರಣೆಯನ್ನೂ ತರುವುದು ಮಂತ್ರಗಳ ಕಾರ್ಯ. ಮಂತ್ರಗಳು ಹೀಗೆ ಪದಾರ್ಥ-ಗಳ ಸ್ಮರಣೆಯನ್ನು ಮಾಡಿಕೊಡುವುದೇ ಅವುಗಳ ಪ್ರಯೋಜನವು. ಮಂತ್ರದ ಉಚ್ಚಾರಣೆಯು ಅದೃಷ್ಟಾರ್ಥವಾಗಿ ಅಲ್ಲ. ದೃಷ್ಟವಾದ ಫಲವು ಇರುವಾಗ ಅದೃಷ್ಟದ ಕಲ್ಪನೆಯನ್ನು ಮಾಡುವುದು ಉಚಿತವಲ್ಲ. ದೃಷ್ಟವಾದ ಅರ್ಥದ ಸ್ಮರಣೆಯನ್ನು ಪ್ರಕಾರಾಂತರದಿಂದಲೂ ಮಾಡಲು ಬರುವುದರಿಂದ ಮಂತ್ರ-ಗಳಿಂದ ಅದನ್ನು ಮಾಡುವುದು ವ್ಯರ್ಥ ಎಂಬ ಆಕ್ಷೇಪವು ಸರಿಯಲ್ಲ. ಮಂತ್ರ-ಗಳಿಂದಲೇ ಯಾಗದಲ್ಲಿ ಪದಾರ್ಥದ ಸ್ಮರಣೆ ಮಾಡಿಕೊಳ್ಳಬೇಕು ಎಂಬ ನಿಯಮವಿಧಿಯನ್ನು ಆಶ್ರಯಿಸಲಾಗುತ್ತದೆ.

### 74) ನಿಯಮವಿಧಿ

ಅನೇಕ ಸಾಧನಗಳಿಂದ ಸಿದ್ಧವಾಗುವ ಕ್ರಿಯೆಗೆ ಯಾವುದೇ ಒಂದು ಸಾಧನವು ಒದಗಿಬಂದಾಗ ಪಾಕ್ಷಿಕವಾಗಿ ಅಪ್ರಾಪ್ತವಾದ ಸಾಧನವನ್ನೇ ನಿಯಮಿಸುವ ವಿಧಿಯು ನಿಯಮವಿಧಿಯು ಅಪೂರ್ವವಿಧಿ, ನಿಯಮಪಿಧಿ ಮತ್ತು ಪರಿಸಂಖ್ಯಾವಿಧಿಗಳ ಸ್ವರೂಪವನ್ನು ತಂತ್ರವಾರ್ತಿಕದಲ್ಲಿ ಹೀಗೆ ಹೇಳಲಾಗಿದೆ.

ವಿಧಿರತ್ಯಂತಮಪ್ರಾಪ್ತೇ ನಿಯಮಃ ಪಾಕ್ಷಿಕೇಸತಿ ।
ತತ್ರ ಚಾನ್ಯತ್ರ ಚ ಪ್ರಾಪ್ತೇ ಪರಿಸಂಖ್ಯೇತಿ ಗೀಯತೇ ॥ (ತಂ.ವಾ.1.2.42)

ಇದರ ಅರ್ಥವು ಹೀಗಿದೆ– 'ಪ್ರಮಾಣಾಂತರದಿಂದ ಪ್ರಾಪ್ತವಾಗದಿರುವುದರ ವಿಧಿಯು ಅಪೂರ್ವವಿಧಿಯು. ಉದಾಹರಣೆ– 'ಯಜೇತ ಸ್ವರ್ಗಕಾಮಃ' 'ಸ್ವರ್ಗಾರ್ಥವಾಗಿ ಮಾಡಬೇಕಾದ ಯಾಗವು ಪ್ರಮಾಣಾಂತರದಿಂದ ಪ್ರಾಪ್ತ-ವಾಗದಿರುವುದರಿಂದ ಅದರ ವಿಧಾನವನ್ನು ಇಲ್ಲಿ ಮಾಡಲಾಗಿದೆ.

75) ಪಾಕ್ಷಿಕವಾಗಿ ಪ್ರಾಪ್ತವಾಗದಿರುವುದನ್ನು ವಿಧಾನ ಮಾಡುವುದು ನಿಮಯವಿಧಿಯು. ಉದಾಹರಣೆ 'ವ್ರೀಹೀನ್ ಅವಹಂತಿ' (ತೈ.ಬ್ರಾ.3.2.5). ಈ ವಿಧಿಯಿಂದ ವಿತುಷೀಕರಣಕ್ಕಾಗಿ ಅವಘಾತವನ್ನು ಹೇಳಿಲ್ಲ. ಏಕೆಂದರೆ, ಅವಘಾತ-ದಿಂದ ವಿತುಷೀಕರಣವು ಅನ್ವಯವ್ಯತಿರೇಕದಿಂದ ಸಿದ್ಧವಾಗಿದೆ. ಆದರೆ ಅವಘಾತದಿಂದಲೇ ವಿತುಷೀಕರಣವನ್ನು ಮಾಡಬೇಕು ಎಂದು ನಿಯಮವನ್ನು ಹೇಳಲಾಗಿದೆ. ಇದು ಅಪ್ರಾಪ್ತವಾದ ಅಂಶದ ಪೂರಕವಾಗಿದೆ. ವಿತುಷೀಕರಣವು ಅನೇಕ ಉಪಾಯಗಳಿಂದ ಸಾಧ್ಯವಾಗಿದೆ. ಅದರಲ್ಲಿ ಅವಘಾತವೂ ಒಂದು. ಈ ಅವಘಾತವನ್ನು ಬಿಟ್ಟು ಉಪಾಯಾಂತರವನ್ನು ಸ್ವೀಕರಿಸಲು ಆರಂಭಿಸಿದಾಗ ಅವಘಾತವು ಅಪ್ರಾಪ್ತವಾಗುವುದು. ಈ ಅಪ್ರಾಪ್ತವಾದುದರ ವಿಧಾನರೂಪವಾದ 'ಅಪ್ರಾಪ್ತಾಂಶದ ಪೂರಣವೇ ಈ ವಿಧಿಯಿಂದ ಮಾಡಲ್ಪಟ್ಟಿದೆ. ಆದ್ದರಿಂದ ನಿಯಮವಿಧಿಯಲ್ಲಿ ಅಪ್ರಾಪ್ತಾಂಶದ ಪೂರಣವನ್ನು ಮಾಡಬೇಕು ಎಂಬ ನಿಯಮವೇ ವಾಕ್ಯಾರ್ಥವು ಪಾಕ್ಷಿಕವಾಗಿ ಬಾರದೇ ಇದ್ದ ಅವಘಾತದ ವಿಧಾನವು ಎಂದು ಅಭಿಪ್ರಾಯವು.

**75) ಪರಿಸಂಖ್ಯಾವಿಧಿಯು**

ಎರಡು ಕಾರ್ಯಗಳು ಒಟ್ಟಿಗೇ ಬಂದಾಗ ಅದರಲ್ಲಿ ಒಂದರ ವ್ಯಾವೃತ್ತಿಯನ್ನು ಮಾಡುವ ವಿಧಿಯು ಪರಿಸಂಖ್ಯಾ ವಿಧಿಯು ಉದಾಹರಣೆ. 'ಪಂಚ ಪಂಚನಖಾಃ ಭಕ್ಷ್ಯಾಃ' (ಕಿ.ಕಾಂ.2.30) ಐದು ಉಗುರುಗಳಿರುವ ಐದರ ಭಕ್ಷಣೆಯನ್ನು ಮಾಡಬೇಕು. ಈ ವಾಕ್ಯವು ಪಂಚಪಂಚನಖ ಭಕ್ಷಣವನ್ನು ವಿಧಾನ ಮಾಡುವುದಿಲ್ಲ. ಏಕೆಂದರೆ ಅದು ರಾಗತಃ ಪ್ರಾಪ್ತವಾಗಿದೆ, ಎಂದರೆ ಮನುಷ್ಯನ ಭಕ್ಷಣ ಮಾಡುವ ಇಚ್ಛೆಯಿಂದಲೇ ಪ್ರಾಪ್ತವಾಗಿದೆ. ಇದು ನಿಯಮವಿಧಿಯೂ ಅಲ್ಲ. ಪಂಚಪಂಚ-ನಖಭಕ್ಷಂ, ಪಂಚೇತರಪಂ ಚ ನಖಭಕ್ಷಣ ಇವು ಒಟ್ಟಿಗೇ ಪ್ರಾಪ್ತವಾಗಿದೆ. ಇವುಗಳ ಪಾಕ್ಷಿಕವಾದ ಅಪ್ರಾಪ್ತಿಯು ಇರುವುದಿಲ್ಲ. ಆದ್ದರಿಂದ ಇಲ್ಲಿ ಪಂಚಪಂಚ-ನಖವಲ್ಲದವುಗಳ ಭಕ್ಷಣದ ನಿವೃತ್ತಿಯನ್ನೇ ಹೇಳಲಾಗಿದೆ. ಆದ್ದರಿಂದ ಇದು ಪರಿಸಂಖ್ಯಾವಿಧಿಯು.

**76) ಪರಿಸಂಖ್ಯಾವಿಧಿಯು ಎರಡು ವಿಧ.**

ಪರಿಸಂಖ್ಯಾಪಿಧಿಯು ಶ್ರೌತೀ, ಲಾಕ್ಷಣಿಕೀ ಎಂದು ಎರಡು ವಿಧವಾಗಿದೆ. 'ಅತ್ರ ಹಿ ಏವ ಅವಯಂತಿ' (10.4.21.22) ಇದು ಶ್ರೌತೀ ಪರಿಸಂಖ್ಯೆಯ ಉದಾಹರಣೆಯು ಇಲ್ಲಿ 'ಏವಕಾರದಿಂದ ಪವಮಾನ ಸ್ತೋತ್ರವನ್ನು ಬಿಟ್ಟು ಇತರ ಸ್ತೋತ್ರಗಳ ವ್ಯಾವೃತ್ತಿಯನ್ನು ಹೇಳಲಾಗಿದೆ. ಪಂಚಪಂಚನಖಾಃ ಭಕ್ಷ್ಯಾಃ

ಎಂಬುದು ಲಾಕ್ಷಣೀಃ ಪರಿಸಂಖ್ಯಾ. ಇಲ್ಲಿ ಇತರ ನಿವೃತ್ತಿವಾಚಕವಾದ ಪದವಿರುವುದಿಲ್ಲ. ಈ ಪರಿಸಂಖ್ಯಾವಿಧಿಯು ಮೂರು ದೋಷಗಳುಳ್ಳದ್ದಾಗಿದೆ.

**77) ಪರಿಸಂಖ್ಯಾವಿಧಿಯ ಮೂರು ದೋಷಗಳು.**

(i) ಶ್ರುತಹಾನಿ (ii) ಅಶ್ರುತಕಲ್ಪನೆಯು (iii) ಪ್ರಾಪ್ತವಾದುದರ ಬಾಧೆಯು. ಇದನ್ನು ಈ ಕೆಳಗಿನಂತೆ ಹೇಳಿದೆ–

ಶ್ರುತಾರ್ಥಸ್ಯ ಪರಿತ್ಯಾಗಾದಶ್ರುತಾರ್ಥಸ್ಯ ಕಲ್ಪನಾತ್ ।
ಪ್ರಾಪ್ತಸ್ಯ ಬಾಧಾದಿತ್ಯೇವಂ ಪರಿಸಂಖ್ಯಾ ತ್ರಿದೂಷಣಾ ॥

ಶ್ರುತವಾದ ಎಂದರೆ ವಿಧಿವಾಕ್ಯದಲ್ಲಿ ಹೇಳಲಾದ ಪಂಚಪಂಚನಖ ಭಕ್ಷಣವನ್ನು ಕೈಬಿಡಲಾಗಿದೆ. ಹೇಳದಿರುವ ಪಂಚಪಂಚನಖವಿಲ್ಲದವುಗಳ ಭಕ್ಷಣದ ನಿವೃತ್ತಿಯನ್ನು ಕಲ್ಪಿಸಲಾಗಿದೆ. ಪ್ರಾಪ್ತವಾದ ಪಂಚಪಂಚನಖಗಳಿಲ್ಲದವುಗಳ ಭಕ್ಷಣದ ಬಾಧವನ್ನು ಮಾಡಲಾಗಿದೆ. ಈ ಮೂರೂ ದೋಷಗಳಲ್ಲಿ ಎರಡು ದೋಷಗಳ ಶಬ್ದನಿಷ್ಠ- ವಾದುವು. ಪ್ರಾಪ್ತಬಾಧವು ಅರ್ಥನಿಷ್ಠವಾದುದು.

**78) ಕೆಲವು ಮಂತ್ರಗಳ ಉಚ್ಚಾರಣೆಯು ಅದೃಷ್ಟಾರ್ಥವಾಗಿದೆ.**

## V. ನಾಮಧೇಯ ಪರಿಚ್ಛೇದ

**79)** ನಾಮಧೇಯಗಳು ವಿಧೇಯವಾದ ಅರ್ಥದ ಅವಚ್ಛೇದಕವಾಗಿ ಪ್ರಯೋಜನವುಳ್ಳವುಗಳಾಗಿವೆ. ಉದಾಹರಣೆ– 'ಉದ್ಭಿದಾ ಯಜೇತ ಪಶುಕಾಮಃ' ಎಂಬಲ್ಲಿ ಬಂದ ಉದ್ಭಿದ್ ಶಬ್ದವು ಯಾಗದ ನಾಮಧೇಯವಾಗಿದೆ. ಇದರಿಂದ ವಿಧೇಯಾರ್ಥದ ಪರಿಚ್ಛೇದವಾಗಿದೆ. ಈ ವಾಕ್ಯದಿಂದ ಅಪ್ರಾಪ್ತವಾದ ಫಲವನ್ನುದ್ದೇಶಿಸಿ ಯಾಗದ ವಿಧಾನವನ್ನು ಮಾಡಲಾಗಿದೆ. ಯಾಗಸಾಮಾನ್ಯದ ವಿಧಾನವನ್ನು ಮಾಡಲು ಬರುತ್ತಿಲ್ಲವಾದ್ದರಿಂದ ಯಾಗವಿಶೇಷವನ್ನು ವಿಧಿಸಲಾಗಿದೆ. ಈ ವಿಶೇಷಯಾಗವು ಯಾವುದೆಂದು ಕೇಳಿದರೆ ಉದ್ಭಿದ್ ಶಬ್ದದಿಂದ ಉದ್ಭಿದ್ ನಾಮಕವಾದ ಯಾಗವು ಎಂದು ತಿಳಿದುಬರುವುದು. 'ಉದ್ಭಿದಾ ಯಾಗೇನ' ಎಂದರೆ ಉದ್ಭಿದ್ ನಾಮಕಯಜ್ಞದಿಂದ ಪಶುವನ್ನು ಪಡೆಯಬೇಕು ಎಂದು ಸಾಮಾನಾಧಿಕರಣ್ಯದಿಂದ ಉದ್ಭಿದ್ ಎಂಬ ನಾಮಧೇಯವು ಯಾಗದೊಡನೆ ಅನ್ವಯಿಸುವುದು.

**80) ನಾಮಧೇಯದ ನಾಲ್ಕು ನಿಮಿತ್ತಗಳು.**

(i) ಮತ್ವರ್ಥಲಕ್ಷಣೆಯ ಭಯದಿಂದ (ii) ವಾಕ್ಯಭೇದದ ಭಯದಿಂದ (iii) ತತ್ಪ್ರಖ್ಯಶಾಸ್ತ್ರದಿಂದ (iv) ತದ್ವ್ಯಪದೇಶದಿಂದ.

(i) ಮತ್ವರ್ಥಲಕ್ಷಣಾಭಯದಿಂದ ನಾಮಧೇಯವು 'ಉದ್ಭಿದಾ ಯ ಜೇತ ಪಶುಕಾಮಃ' ಎಂಬಲ್ಲಿ ಉದ್ಭಿದ್ ಶಬ್ದವು ಮತ್ವರ್ಥಲಕ್ಷಣಾಭಯದಿಂದ ಯಾಗದ ನಾಮಧೇಯವೆಂದು ನಿರ್ಣಯಿಸಲಾಗಿದೆ. ಈ ವಾಕ್ಯದಿಂದ ಫಲವನ್ನುದ್ದೇಶಿಸಿ ಯಾಗವಿಧಾನವನ್ನೂ ಯಾಗವನ್ನುದ್ದೇಶಿಸಿ ಗುಣದ ವಿಧಾನವನ್ನೂ ಮಾಡಲು ಬರುವುದಿಲ್ಲ. ಹೀಗೆ ಮಾಡಿದರೆ ವಾಕ್ಯಭೇದವಾಗುವುದು. ಉದ್ಭಿದ್ ಶಬ್ದ ಗುಣಸಮರ್ಪಕ ಎಂದರೆ ಯಾಗವು ಪ್ರಾಪ್ತವಾಗದೇ ಇರುವುದರಿಂದ ಗುಣಶಿಷ್ಟ-ಕರ್ಮದ ವಿಧಾನವನ್ನು ಹೇಳಬೇಕಾಗುವುದು. ಹೀಗೆ ಹೇಳಲು 'ಉದ್ಭಿದ್ವತಾ ಯಾಗೇನ ಪಶುಂ ಭಾವಯೇತ್' ಉದ್ಭಿದ್ರೂಪ ಗುಣವುಳ್ಳ ಯಾಗದಿಂದ ಪಶುವನ್ನು ಪಡೆಯಬೇಕು ಎಂದು ವಿಶಿಷ್ಟವಿಧಿಯನ್ನು ಮಾಡಿದರೆ ಮತ್ವರ್ಥಲಕ್ಷಣಾ ಮಾಡಬೇಕಾಗುವುದು. ಆದ್ದರಿಂದ ಉದ್ಭಿದ್ ಶಬ್ದವನ್ನು ಯಾಗದ ನಾಮಧೇಯ-ವೆಂದು ತೆಗೆದುಕೊಳ್ಳಬೇಕು.

(ii) ವಾಕ್ಯಭೇದಭಯಾತ್ ನಾಮಧೇಯತ್ವಂ

ವಾಕ್ಯಭೇದದ ಭಯದಿಂದ ನಾಮಧೇಯತ್ವವು.

'ಚಿತ್ರಯಾ ಯಜೇತ ಪಶುಕಾಮಃ' (ತೈ.ಸಂ.2.4.6.1) ಎಂಬಲ್ಲಿ ವಾಕ್ಯಭೇದ ಭಯದಿಂದ ಚಿತ್ರಾಶಬ್ದವು ಕರ್ಮನಾಮಧೇಯವೆಂದು ನಿರ್ಧರಿಸಲಾಗಿದೆ. ಇಲ್ಲಿ ಗುಣವಿಶಿಷ್ಟವಾದ ಯಾಗದ ವಿಧಾನವನ್ನು ಮಾಡಲು ಬರುವುದಿಲ್ಲ. 'ದಧಿ, ಮಧು, ಪಯಃ, ಘೃತಂ, ಧಾನಾ, ಉದಕಂ, ತಂಡುಲಾಃ, ಪ್ರಾಜಾಪತ್ಯಂ ಎಂಬ ವಾಕ್ಯದಿಂದ ಗುಣಗಳು ಪ್ರತ್ಯೇಕವಾಗಿ ವಿಹಿತವಾದ್ದರಿಂದ ಗುಣವಿಶಿಷ್ಟವಾದ ಯಾಗದ ವಿಧಾನ-ವನ್ನು ಇಲ್ಲಿ ಮಾಡಲು ಬರುವುದಿಲ್ಲ. ಅಲ್ಲದೆ ಯಾಗಕ್ಕೆ ಫಲಸಂಬಂಧ ಮತ್ತು ಗುಣಸಂಬಂಧದ ವಿಧಾನವನ್ನು ಮಾಡಿದರೆ ವಾಕ್ಯಭೇದವುಂಟಾಗುವುದು. ಆದ್ದರಿಂದ ಚಿತ್ರಾಶಬ್ದವು ಕರ್ಮನಾಮಧೇಯವು. ಇದು ಕರ್ಮನಾಮಧೇಯ-ವೆಂದು ಹೇಳಿದರೆ ''ಚಿತ್ರಾಯಾಗೇನ ಪಶುಂ ಭಾವಯೇತ್'' ಎಂದು ಸಾಮಾನಾಧಿಕರಣ್ಯದಿಂದ ಅನ್ವಯವಾಗುವುದರಿಂದ ವಾಕ್ಯಭೇದವು ಪ್ರಸಕ್ತ-ವಾಗುವುದಿಲ್ಲ. ಈ ಇಷ್ಟಿಗೆ ಅನೇಕ ದ್ರವ್ಯಗಳಿರುವುದರಿಂದ ಚಿತ್ರಾಶಬ್ದವಾಚ್ಯತ್ವವು ಉಚಿತವಾಗಿರುವುದು.

(iii) ತತ್ಪ್ರಖ್ಯಶಾಸ್ತ್ರದಿಂದ ನಾಮಧೇಯತ್ವವು.

'ಅಗ್ನಿಹೋತ್ರಂ ಜುಹೋತಿ' (ಮೈ.ಸಂ.1.8.6) ಎಂಬಲ್ಲಿ ಅಗ್ನಿಹೋತ್ರಶಬ್ದವು ತತ್ಪ್ರಖ್ಯಶಾಸ್ತ್ರದಿಂದ ಕರ್ಮದ ನಾಮಧೇಯ ಎಂದು ನಿರ್ಧರಿಸಲಾಗಿದೆ. ತತ್ಪ್ರಖ್ಯಶಾಸ್ತ್ರದ ಅರ್ಥವು ಹೀಗಿದೆ. ಆ ಗುಣವನ್ನು ದೊರಕಿಸಿಕೊಡುವ ಇನ್ನೊಂದು ಶಾಸ್ತ್ರವಿದೆ. ಆದ್ದರಿಂದ ಅಗ್ನಿಹೋತ್ರ ಶಬ್ದವು ಕರ್ಮನಾಮಧೇಯವು. ಇದು ಗುಣವಿಧಿಯಾಗಲಿ ಎಂಬ ಆಕ್ಷೇಪವು ಸರಿಯಲ್ಲ. 'ಅಗ್ನೌ ಹೋತ್ರಂ ಅಸ್ಮಿನ್' ಎಂಬ ಸಪ್ತಮೀ ಸಮಾಸವನ್ನು ಆಶ್ರಯಿಸಿದರೆ ಅಗ್ನಿರೂಪಗುಣವನ್ನು ಹೋಮಕ್ಕೆ ಆಧಾರವಾಗಿ ವಿಧಿಸಲಾಗಿದೆ ಎನ್ನಬೇಕಾಗುವುದು. ಆದರೆ 'ಯದಾಹವನೀಯೇ ಜುಹೋತಿ' ಎಂಬ ವಾಕ್ಯದಿಂದಲೇ ಅಗ್ನಿಯು ಪ್ರಾಪ್ತವಾದ್ದರಿಂದ ಅದರ ವಿಧಾನವನ್ನು ಮಾಡುವುದು ನಿರರ್ಥಕ. 'ಅಗ್ನಯೇ ಹೋತ್ರಂ' ಚತುರ್ಥೀ ಸಮಾಸವನ್ನಾಶ್ರಯಿಸಿ ಅಗ್ನಿದೇವತಾರೂಪಗುಣವು ಈ ವಾಕ್ಯದಿಂದ ವಿಧಿಸಲ್ಪಟ್ಟಿದೆ ಎನ್ನುವುದೂ ಸರಿಯಲ್ಲ. ಶಾಸ್ತ್ರಾಂತರದಿಂದ ಅಗ್ನಿದೇವತೆ ಪ್ರಾಪ್ತವಾಗಿದೆ. ಈ ಶಾಸ್ತ್ರಾಂತರವು ಯಾವುದೆಂದರೆ 'ಯದಗ್ನಯೇ ಪ್ರಜಾಪತಯೇ ಚ ಸಾಯಂ ಜುಹೋತಿ' (ಮೈ.ಸಂ.1.8.7) ಎಂದೂ ಕೆಲವರು ಹೇಳುವರು. ಇನ್ನು ಕೆಲವರು 'ಅಗ್ನಿರ್ ಜ್ಯೋತಿಃ ಜ್ಯೋತಿರಗ್ನಿಸ್ವಾಹಾ' (ಮೈ.ಸಂ.1.6.10) ಎಂಬ ಮಂತ್ರ-ವರ್ಣವೇ ಅಗ್ನಿರೂಪದೇವತೆಗೆ ಪ್ರಾಪಕವಾಗಿದೆ ಎಂದು ಹೇಳುವುದು. ಮಂತ್ರ-ವರ್ಣದಿಂದ ಅಗ್ನಿದೇವತೆಯನ್ನು ಸ್ವೀಕರಿಸಿದರೆ ಪ್ರಜಾಪತಿ ದೇವತೆಗೆ ಬಾಧ ಬರುವುದು ಎಂಬುದು ಸರಿಯಲ್ಲ. ಮಂತ್ರವರ್ಣವು ಚತುರ್ಥೀ ವಿಭಕ್ತಿಗಿಂತ ದುರ್ಬಲವಾಗಿರುವುದು. ಈ ವಿಷಯದಲ್ಲಿ ತಂತ್ರವಾರ್ತಿಕದಲ್ಲಿ ಹೀಗೆ ಹೇಳಿದೆ.

ತದ್ಧಿತೇನ ಚತುರ್ಥ್ಯಾವಾ ಮಂತ್ರವರ್ಣೇನ ವಾ ಪುನಃ ।
ದೇವತಾಯಾಃ ವಿಧಿಃಸ್ತತ್ರ ದುರ್ಬಲಂತು ಪರಂಪರಂ ॥ (ತಂ.ವಾ.2.2.23)

ಇವುಗಳಲ್ಲಿ ನಂತರ ಬಂದುದು ಹಿಂದಿನಕ್ಕಿಂತ ದುರ್ಬಲವಾದುದು ಎಂಬ ವಾದವು ಸರಿಯಲ್ಲ. 'ಯದಗ್ನಯೇ ಪ್ರಜಾಪತಯೇ ಚ ಸಾಯಂ ಜುಹೋತಿ' ಎಂಬಲ್ಲಿ ಕೇವಲ ಪ್ರಜಾಪತಿಯ ವಿಧಾನವನ್ನು ಮಾಡಿಲ್ಲ. ಆದರೆ ಮಂತ್ರವರ್ಣ-ಪ್ರಾಪ್ತವಾದ ಅಗ್ನಿಯ ಅನುವಾದ ಮಾಡಿ ಅದರಿಂದ ಸಮುಚ್ಚಿತವಾದ ಪ್ರಜಾಪತಿಯ ವಿಧಾನವನ್ನು ಮಾಡಲಾಗಿದೆ. ಆದ್ದರಿಂದ ಬಾಧವಿಲ್ಲ. ಕೇವಲ ಪ್ರಜಾಪತಿಯ ವಿಧಾನವನ್ನು ಮಾಡಲಾಗಿಲ್ಲ. ಇಲ್ಲಿ ಸಮುಚ್ಚಿತವಾದ ಉಭಯ ವಿಧಾನವನ್ನು ಮಾಡಿದೆ ಎಂದು ಏಕೆ ಹೇಳಬಾರದು ಎನ್ನುವುದು ಸರಿಯಲ್ಲ. ಸಮುಚ್ಚಿತವಾದ ಉಭಯವಿಧಾನವನ್ನು ಮಾಡುವುದಕ್ಕಿಂತ ಬೇರೆ ರೀತಿಯಿಂದ

ಪ್ರಾಪ್ತವಾದ ಅಗ್ನಿಯ ಅನುವಾದಮಾಡಿ ಅದರಿಂದ ಸಮುಚ್ಚಿತವಾದ ಪ್ರಜಾಪತಿ ಮಾತ್ರದ ವಿಧಾನವನ್ನು ಮಾಡಿದರೆ ಲಾಭವಾಗುವುದು. ಪ್ರಯಾಜಗಳಲ್ಲಿ ಸಮಿಧಾದಿ ದೇವತೆಗಳು 'ಸಮಿಧೋ ಅಗ್ನಿ ಅಜಸೇಷ್ಯಂತು' ಎಂದು (ತೈ.ಬ್ರಾ.3.5.5.1) ಇತ್ಯಾದಿ ಮಂತ್ರವರ್ಣಗಳಿಂದ ಪ್ರಾಪ್ತವಾಗಿವೆ. 'ಸಮಿಧೋ ಯಜತಿ' (ತೈ.ಸಂ.2.6.1.1) ಇತ್ಯಾದಿಗಳಲ್ಲಿ ಬಂದ ಸಮಿಧಾದಿ ಶಬ್ದಗಳ ತತ್ಪ್ರಖ್ಯನ್ಯಾಯದಿಂದ ಕರ್ಮನಾಮಧೇಯಗಳು.

(iv) ತದ್ವ್ಯಪದೇಶದಿಂದ ಕರ್ಮನಾಮಧೇಯತ್ವವು.

ತದ್ವ್ಯಪದೇಶವೆಂದರೆ ಅದರಿಂದ ಉಪಮಾನವನ್ನು ಕೊಟ್ಟಿರುವುದು. 'ಶ್ಯೇನೇನ ಅಭಿಚರನ್ ಯಜೇತ' (ಷ.ಬ್ರಾ.3.8.2) (ಆ.ಶ್ರೌ.ಸೂ.22.4.16) ಎಂಬಲ್ಲಿ ಶ್ಯೇನಶಬ್ದವು ತದ್ವ್ಯಪದೇಶಾತ್ ಎಂದರೆ ಅದನ್ನೇ ಉಪಮಾನವಾಗಿ ಕೊಟ್ಟಿರುವುದರಿಂದ ಕರ್ಮನಾಮಧೇಯವು. ಯಾವುದು ವಿಧೇಯವಾಗಿದೆಯೋ ಅದರ ಸ್ತುತಿಯನ್ನು ಮಾಡಲಾಗುತ್ತದೆ. ಇಲ್ಲಿ ಶ್ಯೇನವು ವಿಧೇಯವಾಗಿದ್ದರೆ ಅರ್ಥವಾದದಿಂದ ಅದರ ಸ್ತುತಿಯನ್ನು ಮಾಡಬೇಕಾಗಿತ್ತು. ಆದರೆ 'ಯಥಾ ವೈ ಶ್ಯೇನಃ ನಿಕೃತ್ಯ ಆದತ್ತೇ ಏವಮಯಂ ದ್ವಿಷಂತಂ ಭ್ರಾತೃವ್ಯಂ ನಿಕೃತ್ಯಾದತ್ತೇ,' (ಷ.ಬ್ರಾ.3.8.3) ಶ್ಯೇನ ಪಕ್ಷಿಯು ಕೆಳಗೆ ಹಾರಿ ತೆಗೆದುಕೊಳ್ಳುವಂತೆ ದ್ವೇಷ ಮಾಡುವ ಶತ್ರುವನ್ನು ಅವನ ಮೈಮೇಲೆ ಬಿದ್ದು ತೆಗೆದುಕೊಳ್ಳುತ್ತಾನೆ. ಈ ಅರ್ಥವಾದದಿಂದ 'ಶ್ಯೇನದ ಸ್ತೋತ್ರವನ್ನು ಮಾಡಲು ಬರುವುದಿಲ್ಲ. ಶ್ಯೇನದ ಉಪಮಾನವನ್ನು ಕೊಟ್ಟು ಬೇರೊಂದರ ಸ್ತುತಿಯನ್ನು ಮಾಡಲಾಗಿದೆ. ಶ್ಯೇನದ ಉಪಮಾನದಿಂದ ಶ್ಯೇನದ ಸ್ತೋತ್ರವನ್ನೇ ಮಾಡಲು ಬರುವುದಿಲ್ಲ. ಉಪಮಾನೋಪಮೇಯ ಭಾವವು ಭಿನ್ನನಿಷ್ಠವಾಗಿರಬೇಕು. ಈ ವಾಕ್ಯದಿಂದ ಶ್ಯೇನ ಸಂಜ್ಞಕಯಾಗದ ವಿಧಾನವನ್ನು ಮಾಡಲಾಗಿದೆ ಎಂದರೆ ಈ ಯಾಗದ ಸ್ತುತಿಯನ್ನು ಮಾಡುವುದು ಶಕ್ಯವಾಗುತ್ತದೆ. ಆದ್ದರಿಂದ ಶ್ಯೇನ ಶಬ್ದವು ಶ್ಯೇನದ ಉಪಮಾನವನ್ನು ಕೊಟ್ಟಿರುವುದರಿಂದ ಕರ್ಮದ ನಾಮಧೇಯವು.

(v) ಉತ್ಪತ್ತಿ ಶಿಷ್ಟಗುಣ ಪ್ರಬಲವಾಗಿರುವುದರಿಂದ ಕರ್ಮದ ನಾಮಧೇಯವು

ಮೇಲೆ ಹೇಳಿದ ನಾಮಧೇಯದ ನಾಲ್ಕು ನಿಮಿತ್ತಗಳಲ್ಲದೆ ಉತ್ಪತ್ತಿ ಶಿಷ್ಟಗುಣವೂ ಕೂಡ ನಾಮಧೇಯದ ಐದನೆ ನಿಮಿತ್ತವಾಗಿದೆ ಎಂದು ಕೆಲವರು ಹೇಳುವರು. ಉದಾಹರಣೆಗೆ 'ವೈಶ್ವ ದೇವೇನ ಯಜೇತ' (ತೈ.ಬ್ರಾ.1.4.10.1) ಎಂಬಲ್ಲಿಯ ವೈಶ್ವದೇವಪದವು ಕರ್ಮನಾಮಧೇಯವಾಗಿದೆ. ಇಲ್ಲಿ ಉತ್ಪತ್ತಿಶಿಷ್ಟವಾದ

ಅಗ್ನ್ಯಾದಿಗಳು ಪ್ರಬಲವಾಗಿರುವುದರಿಂದ ವಿಶ್ವದೇವ ದೇವತೆಯನ್ನು ಗುಣವೆಂದು ಹೇಳಲು ಬರುವುದಿಲ್ಲ. ಆದ್ದರಿಂದ ಅದು ಕರ್ಮದ ನಾಮಧೇಯವು.

ವಸ್ತುತಃ ವಿಚಾರ ಮಾಡಿದರೆ ತತ್ಖ್ಯಶಾಸ್ತ್ರದಿಂದಲೇ ಇದು ಕರ್ಮದ ನಾಮಧೇಯವಾಗುವುದು. ಪ್ರಕೃತಯಾಗದಲ್ಲಿ ವಿಶ್ವದೇವರೂಪಗುಣದ ಸಮರ್ಪಕವಾದ ಅರ್ಥವಾದ ರೂಪಶಾಸ್ತ್ರವು ಇರುವುದು. 'ಯದಶ್ವ ವಿಶ್ವೇ ದೇವಾಃ ಸಮಯುಜಿಂತತ್ ವೈಶ್ವದೇವಸ್ಯ ವೈಶ್ವದೇವತ್ವಂ' (ತೈ.ಬ್ರಾ.1.4.10.5).

(vi) ನಿಷೇಧಪರಿಚ್ಛೇದ

**81) ನಿಷೇಧದ ಮೀಮಾಂಸೆಯು.**

ಪುರುಷನಿಗೆ ನಿವರ್ತನೆಯನ್ನು ಬೋಧಿಸುವ ವಾಕ್ಯವು 'ನಿಷೇಧ ವಾಕ್ಯ.' ನಿಷೇಧವಾಕ್ಯವು ಅನರ್ಥ ಕಾರಣವಾಗುವ ಕಾರ್ಯಗಳಿಂದ ನಿವೃತ್ತಿಯನ್ನು ಮಾಡುವ ಪ್ರಯೋಜನವುಳ್ಳವುಗಳಾಗಿವೆ. ವಿಧಿಯು ಪ್ರವರ್ತನೆಯನ್ನು ಬೋಧಿಸಿ ಅದರ ಪ್ರವರ್ತಕತ್ವದ ನಿರ್ವಾಹಕ್ಕಾಗಿ ವಿಧೇಯವಾದ ಯಾಗಾದಿಗಳ ಇಷ್ಟ-ಸಾಧನತ್ವವನ್ನು ತಿಳಿಸಿ ಅದರಲ್ಲಿ ಪ್ರವೃತ್ತಿಯನ್ನುಂಟುಮಾಡುವಂತೆ 'ನ ಕಲಂ ಜಂ ಭಕ್ಷಯೇತ್' ಇತ್ಯಾದಿಯಾದ ನಿಷೇಧವಾಕ್ಯಗಳು ನಿವರ್ತನೆಯನ್ನು ಪ್ರತಿಪಾದಿಸಿ ತನ್ನ ನಿವರ್ತಕತ್ವದ ನಿರ್ವಾಹಕ್ಕಾಗಿ ನಿಷೇಧ್ಯವಾದ ಕಳಂಜ ಭಕ್ಷಣದ ಅನಿಷ್ಟ-ಸಾಧನತ್ವವನ್ನು ತಿಳಿಸಿ ಅದರಿಂದ ಪುರುಷನ ನಿವೃತ್ತಿಯನ್ನುಂಟುಮಾಡುತ್ತದೆ.

**83) 'ನಞ್' ಶಬ್ದದ ಸ್ವಭಾವನಿರೂಪಣೆಯು.**

ಹತ್ತಿರದಲ್ಲಿದ್ದ ಪದಾರ್ಥಕ್ಕೆ ವಿರೋಧಿಯಾದದ್ದನ್ನು ತಿಳಿಸುವುದು ನಞ್ ಪದದ ಸ್ವಭಾವವು. ಉದಾಹರಣೆಗೆ, 'ಘಟೋನಾಸ್ತಿ' ಎಂಬಲ್ಲಿ ಅಸ್ತಿ ಶಬ್ದದೊಡನೆ ಬಂದ ನಞ್ ಪದವು ಘಟದ ಅಸ್ತಿತ್ವಕ್ಕೆ ವಿರೋಧಿಯಾದ ಘಟದ ನಾಸ್ತಿತ್ವವನ್ನು ಬೋಧಿಸುವುದು ಪ್ರಕೃತದಲ್ಲಿ ಅದರ ಹತ್ತಿರದಲ್ಲಿ ಬಂದ ನಞ ಪದವು ಲಿಙ್‌ದ ಅರ್ಥವಾದ ಪ್ರವರ್ತನೆಗೆ ವಿರೋಧಿಯಾದ ನಿವರ್ತನೆಯನ್ನು ಬೋಧಿಸುವುದು. ವಿಧಿವಾಕ್ಯದ ಶ್ರವಣ ಮಾಡಿದಾಗ 'ಇವನು ನನಗೆ ಪ್ರವರ್ತನೆಯನ್ನು ಬೋಧಿಸು-ತ್ತಾನೆ' ಎಂದು ಪ್ರವರ್ತನೆಯ ಪ್ರತೀತಿಯಾದಂತೆ ನಿಷೇಧವಾಕ್ಯವನ್ನು ಶ್ರವಣ ಮಾಡಿದಾಗ ಇವನು ನನಗೆ ನಿವರ್ತನೆಯನ್ನು ಬೋಧಿಸುತ್ತಿದ್ದಾನೆ ಎಂದು ನಿವೃತ್ತಿಗೆ ಅನುಕೂಲವಾದ ವ್ಯಾಪಾರರೂಪವಾದ ನಿವರ್ತನೆಯ ಪ್ರತೀತಿಯಾಗುವುದು. ಆದ್ದರಿಂದ ನಿಷೇಧವಾಕ್ಯದ ಸ್ಥಳದಲ್ಲಿ ನಿವರ್ತನೆಯೇ ವಾಕ್ಯಾರ್ಥವು. ನಞರ್ಥವು

ಪ್ರತ್ಯಯಾರ್ಥದೊಡನೆ ಅನ್ವಯವಾಗಲು ಎರಡು ವಿಧವಾದ ಬಾಧಕಗಳು. ಪ್ರತ್ಯಯಾರ್ಥವು ನಞರ್ಥದೊಡನೆ ಅನ್ವಯವಾಗಲು ಬಾಧಕವುಂಟಾದಾಗ ಧಾತ್ವರ್ಥದೊಡನೆ ಅದರ ಅನ್ವಯವಾಗುವುದು. ಈ ಬಾಧಕವು ಎರಡು ವಿಧ. (i) 'ತಸ್ಯ ವ್ರತಂ' ಎಂದು ಉಪಕ್ರಮವಿರುವುದು. (ii) ವಿಕಲ್ಪದ ಪ್ರಸಂಗ ಬರುವುದು. ಮೊದಲನೆಯದಕ್ಕೆ 'ನೇಕ್ಷೇ ತೋದ್ಯಂತಂ ಆದಿತ್ಯಂ' (ಮ.ಸ್ಮೃ.4.37) ಎಂಬುದು 'ತಸ್ಯತ್ರತಂ' ಎಂದು ಉಪಕ್ರಮಮಾಡಿ ಈ ವಾಕ್ಯವನ್ನು ಹೇಳಲಾಗಿದೆ.

ಆದ್ದರಿಂದ ಇಲ್ಲಿ ಪರ್ಯುದಾಸದ ಆಶ್ರಯಣವು ಇರುವುದು. ವ್ರತಶಬ್ದವು ಕರ್ತವ್ಯದ ಅರ್ಥದಲ್ಲಿ ರೂಢವಾಗಿರುವುದು. ಇದು ಸ್ನಾತಕನ ವ್ರತದ ಕರ್ತವ್ಯಗಳ ಉಪಕ್ರಮವಾಗಿದೆ. ಈ ಕರ್ತವ್ಯ ಯಾವುದು ಎಂಬ ಆಕಾಂಕ್ಷೆ-ಯುಂಟಾದಾಗ 'ನೇಕ್ಷೇತೋದ್ಯಂತಂ' ಇತ್ಯಾದಿ ವಾಕ್ಯದಿಂದ ಕರ್ತವ್ಯವಾದ ವಿಷಯ ಗಳ ಪ್ರತಿಪಾದನೆಯನ್ನೇ ಮಾಡಬೇಕು. ಇಲ್ಲವಾದರೆ ಪೂರ್ವೋತ್ತರವಾಕ್ಯಗಳಿಗೆ ಏಕವಾಕ್ಯತ್ವವು ಬರುವುದಿಲ್ಲ. ಇಲ್ಲಿ ನಞರ್ಥದ ಅನ್ವಯವು ಪ್ರತ್ಯಯಾರ್ಥ-ದೊಡನೆ ಆಗುವುದಿಲ್ಲ. ಹಾಗೆ ಮಾಡಿದರೆ ಕರ್ತವ್ಯಾರ್ಥದ ಬೋಧವು ಬರುವುದಿಲ್ಲ. ವಿಧ್ಯರ್ಥವಾದ, ಪ್ರವರ್ತನಕ್ಕೆ ವಿರೋಧಿಯಾದ ನಿವರ್ತನೆಯ ಬೋಧನೆ ಪ್ರತ್ಯಯಾರ್ಥದೊಡನೆ ಅನ್ವಯಿಸಿದ ನಞಕ್ಕೆ ಆಗುವುದು. ಇದಕ್ಕೆ ಕರ್ತವ್ಯಾರ್ಥತ್ವವಿಲ್ಲ. ಆದ್ದರಿಂದ ನೇಕ್ಷೇತ ಎಂಬಲ್ಲಿ ನಞ್‌ಪದದಿಂದ ಧಾತ್ವರ್ಥಕ್ಕೆ ವಿರೋಧಿಯಾದ ಅನೀಕ್ಷಾ ಸಂಕಲ್ಪವೇ ಲಕ್ಷಣಾದಿಂದ ಪ್ರತಿಪಾದಕವಾಗುತ್ತದೆ. ಹಾಗೂ ಇದರ ಕರ್ತವ್ಯತ್ವವು ಸಂಭಾವಿಸುತ್ತದೆ.

**85) ಪರ್ಯುದಾಸ ಪಕ್ಷದಲ್ಲಿ ನೇಕ್ಷೇತ ಎಂಬುದರ ವಾಕ್ಯಾರ್ಥವು.**

ಆದಿತ್ಯ ವಿಷಯಕವಾದ ಅನೀಕ್ಷಾ ಸಂಕಲ್ಪದಿಂದ ಪಡೆಯಬೇಕು ಎಂದು ವಾಕ್ಯಾರ್ಥವು. ಇಲ್ಲಿ ಭಾವ್ಯದ ಆಕಾಂಕ್ಷೆಯನ್ನು ಮಾಡಿದಾಗ 'ಏತಾವತಾಃ ಯೇನ ಸಾ ವಿಯುಕ್ತೇ ಭವತಿ' ಎಂಬ ವಾಕ್ಯಶೇಷದಿಂದ ತಿಳಿದುಬರುವ ಪಾಪಕ್ಷಯವು ಭಾವ್ಯವಾಗಿ ಅನ್ವಯಿಸುವುದು. ಇದರಿಂದ ಪೂರ್ವೋತ್ತರ ವಾಕ್ಯಗಳಿಗೆ ಏಕ-ವಾಕ್ಯತ್ವವು ಬರುವುದು. ಇಲ್ಲಿ ಧಾತ್ವರ್ಥಕ್ಕೆ ವಿರೋಧಿಯಾದ ಪದರ್ಥಾಂತರ-ಗಳನ್ನು ಹೇಳಲು ಬರುವುದರಿಂದ ಅನೀಕ್ಷಣ ಸಂಕಲ್ಪವೇ ಭಾವನೆಯೊಡನೆ ಅನ್ವಯವಾಗುವುದು ಎಂದು ಹೇಳುವುದು ಸರಿಯಲ್ಲ. ಅದಕ್ಕೆ ಕರ್ತವ್ಯತೆ ಇಲ್ಲದಿರುವುದರಿಂದ ಅದು ಭಾವನೆಯ ಅನ್ವಯಕ್ಕೆ ಯೋಗ್ಯವಾಗಿಲ್ಲ.

**86) ವಿಕಲ್ಪದ ಪ್ರಸಂಗ ಬಂದಾಗ ಪರ್ಯುದಾಸವನ್ನು ಆಶ್ರಯಿಸುವುದು.**

'ಯಜತಿಷು ಯೇ ಯಜಾಮಹಂ ಕರೋತಿ ನ ಅನುಯಾಜೇಷು' (ಆ.ಶ್ರೌ.ಸೂ. 24.13.5) ಎಂಬಲ್ಲಿ ವಿಕಲ್ಪದ ಪ್ರಸಂಗ ಬಂದಾಗ ಪರ್ಯುದಾಸದ ಆಶ್ರಯವನ್ನು ಮಾಡಲಾಗಿದೆ. ಈ ವಾಕ್ಯದಲ್ಲಿ ನಞರ್ಥದಲ್ಲಿ ಪ್ರತ್ಯಯಾರ್ಥದ ಅನ್ವಯವನ್ನು ಮಾಡಿದಾಗ ಅನುಯಾಜಗಳಲ್ಲಿ 'ಯೇ ಯಜಾಮಹೇ' ಎಂಬ ಮಂತ್ರದ ಪ್ರತಿಷೇಧವಾಗುವುದು. ಅನುಯಾಜಗಳಲ್ಲಿ 'ಯೇ ಯಜಾಮಹಂ ನ ಕುರ್ಯಾತ್' ಯೇ ಯಜಾಮಹಂ ಮಂತ್ರವನ್ನು ಹೇಳಬಾರದು. ಇದು ಪ್ರತಿಷೇಧವು ಪ್ರತಿಷೇಧವನ್ನು ಮಾಡಬೇಕಾದರೆ ಪ್ರಾಪ್ತಿಯು ಇರಬೇಕಾಗುವುದು. ಈ ಪ್ರಾಪ್ತಿಯನ್ನು 'ಯಜತಿಷು ಯೇ ಯಜಾ ಮಹಂ ಕರೋತಿ' ಎಂಬ ಶಾಸ್ತ್ರದಿಂದಲೇ ಹೇಳಬೇಕು. ಶಾಸ್ತ್ರದಿಂದ ಪ್ರಾಪ್ತವಾದುದರ ಪ್ರತಿಷೇಧವನ್ನು ಹೇಳಿದರೆ ವಿಕಲ್ಪವೇ ಆಗುವುದು ಬಾಧವಾಗುವುದಿಲ್ಲ. ರಾಗಪ್ರಾಪ್ತವಾದುದರ ಪ್ರತಿಷೇಧವನ್ನು ಮಾಡಿದರಂತೆ ಶಾಸ್ತ್ರ ಪ್ರಾಪ್ತವಾದುದನ್ನು ಶಾಸ್ತ್ರಾಂತರದಿಂದ ಬಾಧ ಮಾಡಲು ಬರುವುದಿಲ್ಲ. 'ಪದೇ ಜುಹೋತಿ' (ತೈ.ಸಂ.6.1.8.1) ಎಂಬ ವಿಶೇಷಶಾಸ್ತ್ರದಿಂದ 'ಆಹವನೀಯೇ ಜುಹೋತಿ' (ತೈ.ಬ್ರಾ.1.6.5.4) ಎಂಬ ಶಾಸ್ತ್ರದ ಬಾಧವಾಗುವಂತೆ 'ನ ಅನ್‌ಯಾಜೇಷು' ಎಂಬುದರಿಂದ 'ಯಜತಿಷು' ಸರಿಯಲ್ಲ. ಪರಸ್ಪರ ನಿರಪೇಕ್ಷವಾದ ಶಾಸ್ತ್ರಗಳಿಗೆ ಬಾಧ್ಯ ಬಾಧಕ ಭಾವವು ಇರುವುದು. ಪದಶಾಸ್ತ್ರವು ತನ್ನ ವಿಷಯವನ್ನು ವಿಧಾನ ಮಾಡಲು ಆಹವನೀಯ-ಶಾಸ್ತ್ರದ ಅಪೇಕ್ಷೆಯು ಇರುವುದಿಲ್ಲ. ಪ್ರಕೃತದಲ್ಲಿ ನಿಷೇಧಶಾಸ್ತ್ರವು ನಿಷೇಧ್ಯದ ಪ್ರಸಕ್ತಿಗಾಗಿ 'ಯಜತಿಷು ಯೇ ಯಜಾಮಹಂ' ಎಂಬ ಶಾಸ್ತ್ರದ ಅಪೇಕ್ಷೆಯುಳ್ಳ-ದ್ದಾಗಿರುವುದು.

**87) ಬಾಧವು ಆಗುವುದಿಲ್ಲ ಎಂಬುದರ ಉಪಸಂಹಾರವು.**

ಆದ್ದರಿಂದ ಶಾಸ್ತ್ರವಿಹಿತವಾದುದು ಶಾಸ್ತ್ರಾಂತರದಿಂದ ಪ್ರತಿಷೇಧ ಮಾಡುವ ಸಂದರ್ಭ ಬಂದಾಗ ವಿಕಲ್ಪವೇ ಆಗುವುದು. ಹೀಗೆ ವಿಕಲ್ಪವನ್ನು ಮಾಡುವುದು ಸರಿಯಲ್ಲ. ವಿಕಲ್ಪವನ್ನು ಮಾಡಿದರೆ ಶಾಸ್ತ್ರವು ಪಾಕ್ಷಿಕವಾಗಿ ಅಪ್ರಮಾಣವಾಗುವುದು. ಅನುಯಾಜಗಳಲ್ಲಿ 'ಯೇ ಯಜಾಮಹಂ' ಎಂಬುದರ ಅನುಷ್ಠಾನ ಮಾಡಿದರೆ 'ನ ಅನುಯಾಜೇಷು' ಎಂಬುದರ ಪ್ರಾಮಾಣ್ಯವು ಸಂಭವಿಸುವುದಿಲ್ಲ. ಅಲ್ಲದೆ ವ್ರೀಹಿಯಾಗದ ಅನುಷ್ಠಾನವನ್ನು ಮಾಡಿದಾಗ ಯವಶಾಸ್ತ್ರದಂತೆ ಎರಡು (12.2.3.2) (10-15) ಅನಿಷ್ಟಗಳ ಕಲ್ಪನೆಯನ್ನು ಮಾಡುವ ಪ್ರಸಂಗ ಬರುವುದು. ಯಾಕೆಂದರೆ ವಿಧಿ ಮತ್ತು ಪ್ರತಿಷೇಧ ಎರಡೂ ಕ್ರತ್ವರ್ಥವಾಗಿರುವುವು. ಆದ್ದರಿಂದ

